# ಹೊಸಗನ್ನಡ ಸಾಹಿತ್ಯದ ವಿಕಾಸ : ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ

[ಎಂ.ಫಿಲ್. ಪದವಿಗಾಗಿ ಅರ್ಪಿಸಿದ ಮಹಾಪ್ರಬಂಧ]

ಸಂಶೋಧನಾ ವಿದ್ಯಾರ್ಥಿನಿ
ಶ್ರೀಮತಿ ಸುಕನ್ಯಶಿವಶಂಕರ್



ಮಾರ್ಗದರ್ಶಕರು
ಡಾ॥ ಸುಮಾ ಬಿ.ಯು.
ಕನ್ನಡ ಸ್ನಾತಕೋತ್ತರ ಕೇಂದ್ರ
ಸರ್ಕಾರಿ ಪ್ರಥಮದರ್ಜೆ ಕಾಲೇಜು
ವಿಜಯನಗರ, ಬೆಂಗಳೂರು.



ಕಾವ್ಯ ಮಂಡಲ
ಬೆಂಗಳೂರು

೨೦೧೨

# ಹೊಸಗನ್ನಡ ಸಾಹಿತ್ಯದ ವಿಕಾಸ : ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ

[ಎಂ.ಫಿಲ್ ಪದವಿಗಾಗಿ ಅರ್ಪಿಸಿದ ಮಹಾಪ್ರಬಂಧ]

ಸಂಶೋಧನಾ ವಿದ್ಯಾರ್ಥಿನಿ
ಶ್ರೀಮತಿ ಸುಕನ್ಯಶಿವಶಂಕರ್
**KVMBKS - 00544**

ಮಾರ್ಗದರ್ಶಕರು
ಡಾ॥ ಸುಮಾ ಬಿ.ಯು.
ಕನ್ನಡ ಸ್ನಾತಕೋತ್ತರ ಕೇಂದ್ರ
ಸರ್ಕಾರಿ ಪ್ರಥಮದರ್ಜೆ ಕಾಲೇಜು
ವಿಜಯನಗರ, ಬೆಂಗಳೂರು.

ಕಾವ್ಯ ಮಂಡಲ
ಬೆಂಗಳೂರು
೨೦೧೨

# ಪ್ರಮಾಣ ಪತ್ರ

'ಹೊಸಗನ್ನಡ ಸಾಹಿತ್ಯದ ವಿಕಾಸ : ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ **ಕನ್ನಡ ವಿಶ್ವವಿದ್ಯಾಲಯದ ಮಾನ್ಯತಾ ಕೇಂದ್ರವಾದ ಕಾವ್ಯಮಂಡಲ, ಬೆಂಗಳೂರು** ಇಲ್ಲಿಗೆ ಸಲ್ಲಿಸಲು ಡಾ॥ ಬಿ. ಯು. ಸುಮಾ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಈ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರ ಯಾವುದೇ ಉದ್ದೇಶಗಳಿಗಾಗಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ಸ್ಪಷ್ಟಪಡಿಸುತ್ತೇನೆ.

ದಿನಾಂಕ : 29/6/12

ಸ್ಥಳ : ಬೆಂಗಳೂರು

ಸಂಶೋಧಕರು

**ಶ್ರೀಮತಿ ಸುಕನ್ಯಶಿವಶಂಕರ್**

# ದೃಢೀಕರಣ ಪತ್ರ

'ಹೊಸಗನ್ನಡ ಸಾಹಿತ್ಯದ ವಿಕಾಸ: ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವು **ಕನ್ನಡ ವಿಶ್ವವಿದ್ಯಾಲಯದ ಮಾನ್ಯತಾ ಕೇಂದ್ರವಾದ ಬೆಂಗಳೂರಿನ ಕಾವ್ಯಮಂಡಲಕ್ಕೆ** ಸಲ್ಲಿಸಲೆಂದು ನನ್ನ ಸಲಹೆ ಹಾಗೂ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾಗಿದೆ. ಈ ಮಹಾಪ್ರಬಂಧವನ್ನು ಸಂಶೋಧಕರು ತಮ್ಮ ಸ್ವಂತ ಸಂಶೋಧನೆಯ ಮೂಲಕ ರೂಪಿಸಿರುತ್ತಾರೆ. ಇದರ ವಿಷಯವನ್ನಾಗಲೀ ಅಥವ ಯಾವುದೇ ಭಾಗವನ್ನಾಗಲೀ ಈ ಮೊದಲು ಬೇರೆ ಯಾವುದೇ ಪದವಿಗಾಗಿ ಒಪ್ಪಿಸಿರುವುದಿಲ್ಲ.

ದಿನಾಂಕ : 29/6/12

ಸ್ಥಳ : ಬೆಂಗಳೂರು

**ಡಾ॥ ಸುಮಾ ಬಿ. ಯು.**
ಮಾರ್ಗದರ್ಶಕರು
ಕನ್ನಡ ಸ್ನಾತಕೋತ್ತರ ಕೇಂದ್ರ
ಸರ್ಕಾರಿ ಪ್ರಥಮದರ್ಜೆ ಕಾಲೇಜು
ವಿಜಯನಗರ, ಬೆಂಗಳೂರು.

# ಪರಿವಿಡಿ

# ೧. ಹೊಸಗನ್ನಡ ಸಾಹಿತ್ಯದ ವಿಕಾಸ : ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ

## ಅಧ್ಯಯನದ ಉದ್ದೇಶ ಸ್ವರೂಪ ಹಾಗೂ ವ್ಯಾಪ್ತಿ

ಈಸ್ಟ್ ಇಂಡಿಯಾ ಕಂಪನಿಯ ಮೂಲಕ ವ್ಯಾಪಾರಕ್ಕಾಗಿ ಬಂದ ಬ್ರಿಟಿಷರು ರಾಜಕೀಯ ಲಾಭದೊಂದಿಗೆ ಸಾಂಸ್ಕೃತಿಕ ಹಿಡಿತ ಸಾಧಿಸಲು ಶಿಕ್ಷಣ ಸಂಸ್ಥೆಗಳನ್ನು ಹುಟ್ಟುಹಾಕಿದರು. ಭಾರತದಾದ್ಯಂತ ಅವರು ಸ್ಥಾಪಿಸಿದ ಶಿಕ್ಷಣ ಸಂಸ್ಥೆಗಳು ಭಾರತೀಯರಿಗೆ ಪಾಶ್ಚಿಮಾತ್ಯ ಶಿಕ್ಷಣವನ್ನು ಬೋಧಿಸಿದವು. ಪಾಶ್ಚಾತ್ಯ ಪದ್ಧತಿಯ ಶಿಕ್ಷಣ ಹಾಗೂ ಇಂಗ್ಲಿಷ್ ಸಾಹಿತ್ಯದ ಅಭ್ಯಾಸಗಳು ನಮ್ಮ ಮನೋಧರ್ಮವನ್ನು ತಿದ್ದಲು ಅಣಿಯಾದವು. ಹೊಸತನದ ಹಂಬಲವು ಸ್ಥಳೀಯ ವಾತಾವರಣವನ್ನೇ ಬದಲಿಸಲಾರಂಭಿಸಿತು. 'ಪಾಶ್ಚಾತ್ಯ ಸಂಸ್ಕೃತಿ, ವಿಚಾರ ಲಹರಿ, ಸ್ವಾತಂತ್ರ್ಯ-ಪ್ರಜಾಪ್ರಭುತ್ವ ಮತ್ತು ವ್ಯಕ್ತಿಯ ಮಹತ್ವವನ್ನು ಕುರಿತ ಕಲ್ಪನೆಗಳು ಭಾರತೀಯರ ಮೇಲೆ ಸಹಜವಾಗಿಯೇ ಕನ್ನಡಿಗರ ಮೇಲೆ ಆದ ಕಾಲ. ಪಾಶ್ಚಾತ್ಯ ಸಂಸ್ಕೃತಿಗೆ ಒಮ್ಮೆ ಮನಸೋತು, ಒಮ್ಮೆ ಅದಕ್ಕೆ ಬೆನ್ನು ತಿರುಗಿಸಿ ಭಾರತೀಯ ಸಂಸ್ಕೃತಿಗೆ ಆತುಕೊಂಡು, ಭಾರತೀಯರ ಮನಸ್ಸು ಹೊಸ ನಿಲುವು-ಒಲವುಗಳನ್ನು ಸ್ವೀಕರಿಸುತ್ತಿತ್ತು.[೧]

ಹೊಸಗನ್ನಡದ ಸಾಹಿತ್ಯದ ಆರಂಭಕಾಲ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ. ಈ ಕಾಲ ಹಾಗೂ ಇಪ್ಪತ್ತನೆಯ ಶತಮಾನದ ಆರಂಭದ ದಶಕಗಳು ಪರಿವರ್ತನೆಯ ಘಟ್ಟ. ಇದಕ್ಕೆ ಮುಖ್ಯ ಕಾರಣ ದೇಶದ ಜನಜೀವನದಲ್ಲಿ ಆಗುತ್ತಿದ್ದ ವ್ಯಾಪಕ ಹಾಗೂ ಬಹುಮುಖವಾದ ಕ್ರಾಂತಿ. ಹತ್ತೊಂಬತ್ತನೆಯ ಶತಮಾನದ ಕೊನೆಯ ದಶಕಗಳು ಹಾಗೂ ಇಪ್ಪತ್ತನೆಯ ಶತಮಾನದ ಮೊದಲ ಎರಡು ದಶಕಗಳು ಕನ್ನಡ ಸಾಹಿತ್ಯದಲ್ಲಿ ಹೊಸ ಹೆಬ್ಬಾಗಿಲನ್ನು ತೆರೆದವು.

ಕನ್ನಡದಲ್ಲಿ ಹೊಸಬಗೆಯ ಸಾಹಿತ್ಯ ಸೃಷ್ಟಿಗೆ ಮುಖ್ಯ ಪ್ರೇರಣೆ ಇಂಗ್ಲಿಷಿನ ವಿದ್ಯಾಭ್ಯಾಸದಿಂದ ಬಂದದ್ದು. ಇದರ ಎರಡು ಮುಖ್ಯ ಪರಿಣಾಮಗಳೆಂದರೆ :

೧. ಹೊಸದೊಂದು ಸಾಮಾಜಿಕ ವ್ಯವಸ್ಥೆ

೨. ಹೊಸದೊಂದು ಸಾಂಸ್ಕೃತಿಕ ಪರಿಸರ

ಆಧುನಿಕ ಪೂರ್ವ ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರೇರಕ, ಪೋಷಕ ಹಾಗೂ ಗುರುವಾಗಿತ್ತು. "ಕನ್ನಡ ಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯವೇ ಪ್ರೇರಕ, ಪೋಷಕ, ಗುರು" ಎಂದು ಬಿ.ಎಂ.ಶ್ರೀ.[೨]ಯವರು ಹೇಳಿದಹಾಗೆ ಕನ್ನಡ ಸಾಹಿತ್ಯ ಸಂಸ್ಕೃತದ ಪ್ರಭಾವವನ್ನು ತನ್ನದಾಗಿಸಿಕೊಂಡು ತಾನು ಮೈದುಂಬಿಸಿಕೊಂಡಿತು. 'ಆಧುನಿಕ' ಎಂದು ಕರೆಯಲ್ಪಡುವ ಸಾಹಿತ್ಯವು ಇಂಗ್ಲಿಷ್ ಸಾಹಿತ್ಯದ ಸಂಪರ್ಕಕ್ಕೆ ಬಂದು, ಇಂಗ್ಲಿಷ್ ಕಾವ್ಯ ಮತ್ತು ವಿಮರ್ಶನ ವಿಚಾರಗಳ

---

೧. ಪ್ರೊ. ಎಲ್. ಎಸ್. ಶೇಷಗಿರಿರಾವ್ 'ಸಮಗ್ರ ವಿಮರ್ಶಾ ಸಾಹಿತ್ಯ' ಸಂಪುಟ-೧ – ಪು.ಸಂ. ೧೦. (ಕನ್ನಡ ಮತ್ತು ಸಂಸ್ಕೃತಿ ಇಲಾಖೆ), ಕರ್ನಾಟಕ ಸರ್ಕಾರ ೨೦೧೦.

೨. ಬಿ.ಎಂ. ಶ್ರೀಕಂಠಯ್ಯ – ಕನ್ನಡ ಕೈಪಿಡಿ – ಸಂಪುಟ-೨ – ಪು. ೪೭೨

ಪ್ರಭಾವಕ್ಕೊಳಗಾಯಿತು. ಹಳೆಯದನ್ನ ಬಿಸುಟು ಹೊಸದನ್ನ ಸ್ವಾಗತಿಸುವ ಸೂತ್ರವೇ ಜೀವಂತಿಕೆಯ ಮುಖ್ಯ ಕುರುಹು. ಅಂತೆಯೇ ಕನ್ನಡ ಕಾವ್ಯವೂ ಆ ಜೀವಂತ ವಿಕಾಸದ ಹಾದಿಯಲ್ಲಿ ನಡೆದು ಹೊಸ ಪ್ರಭಾವವನ್ನು ಬರಮಾಡಿಕೊಂಡಿದೆ.

'ಶ್ರೀ'ಯವರ ಮಾತಿನಂತೆ ಹೊಸಗನ್ನಡ ಕಾವ್ಯಕ್ಕೆ ಸ್ಫೂರ್ತಿಯು ಇಂಗ್ಲಿಷ್ ಕಾವ್ಯ ಪ್ರಭಾವದಿಂದ ಬದಲಾಯಿಸಿದ್ದ ಜನಜೀವನದಲ್ಲೇ ಎಂಬುದು ಸ್ಪಷ್ಟವಾಗುತ್ತದೆ. ಅದರ ಫಲವೇ ಹೊಸ ಸಾಹಿತ್ಯ ಅಥವಾ ಆಧುನಿಕ ಸಾಹಿತ್ಯ. ೧೯೧೧ರಲ್ಲೇ 'ಶ್ರೀ'ಯವರು ಧಾರವಾಡದ ವಿದ್ಯಾವರ್ಧಕ ಸಂಘದಲ್ಲಿ 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ವಿಷಯವನ್ನು ಕುರಿತು ಭಾಷಣ ಮಾಡಿದರು. ಈ ಭಾಷಣವು ಕನ್ನಡಿಗರೆಲ್ಲರಿಗೆ ಸ್ಫೂರ್ತಿಯ ಸೆಲೆಯಾಗಿ ಭಾಷಾ ಜಾಗೃತಿಯನ್ನೂ, ಭಾಷಾಭಿಮಾನವನ್ನು ಮೂಡಿಸಿತು. ಆಂಗ್ಲ ಸಾಹಿತ್ಯಕ್ಕೆ ಸರಿಸಾಟಿಯಾಗಿ ಭಾರತೀಯ ಭಾಷೆಗಳು ತಮ್ಮ ಹಿರಿಮೆ-ಗರಿಮೆಗಳನ್ನು ಅರಿಯಲಾರಂಭಿಸಿದವು. ಹೀಗೆ ಎಲ್ಲರ ಮನದಲ್ಲೂ, ಮನೆಯಲ್ಲೂ ಕನ್ನಡ ಜಾಗೃತಿಯನ್ನು ಮೂಡಿಸುವಂತೆ ಹೊಸಗನ್ನಡದ ಆಧುನಿಕ ಕನ್ನಡದ ಶುಭೋದಯವೆಂಬಂತೆ ೧೯೨೧ರಲ್ಲಿ 'ಶ್ರೀ'ಯವರು 'ಇಂಗ್ಲಿಷ್ ಗೀತ'ಗಳನ್ನು ಅನುವಾದಿಸಿದರು :

'ಇವಳ ಸೊಬಗನವಳಿಗಿಟ್ಟು ನೋಡಬಯಸಿದೆ,
ಅವಳ ತೊಡುಗೆ ಇವಳಿಗಿಟ್ಟು ಹಾಡಬಯಸಿದೆ'

ಎಂದು ಹಾಡುವ ಮೂಲಕ ಎರಡೂ ಸಂಸ್ಕೃತಿಗಳ ಸಾಮರಸ್ಯವನ್ನು ಕುರಿತು ಹೇಳಿದರು.

ಈ ರೀತಿಯ ಚಟುವಟಿಕೆಗಳಿಂದ ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲೂ ಹೊಸದೊಂದು ಸಾಂಸ್ಕೃತಿಕ ಸ್ಥಿತಿ ರೂಪುಗೊಳ್ಳತೊಡಗಿತು. ಅದು ಕರ್ನಾಟಕದ ಎಲ್ಲಾ ಪ್ರದೇಶಗಳಲ್ಲೂ ಹರಡಿತು. ಹಾಗೆಯೇ ಬೆಂಗಳೂರಿನಲ್ಲಿಯೂ ಈ ರೀತಿಯ ಸಾಂಸ್ಕೃತಿಕಚಟುವಟಿಕೆಗಳು ಪ್ರಾರಂಭವಾದವು. ಅಂತಹ ಒಂದು ಮಹತ್ವದ ಚಟುವಟಿಕೆಗೆ ಸಾಕ್ಷಿಯಾದ ವರ್ಷವೇ ೧೯೧೮.

೧೯೧೮ ಕರ್ನಾಟಕದ ಇತಿಹಾಸದಲ್ಲಿ ಬರೆದಿಡಬಹುದಾದ ಒಂದು ಮಹತ್ವದ ಘಟನೆಗೆ ಸಾಕ್ಷಿಯಾದ ವರ್ಷ. 'ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ'ವು ೧೯೧೮ರ ಆಗಸ್ಟ್‌ನಲ್ಲಿ ಸ್ಥಾಪನೆಯಾಯಿತು. ಅದರ ಸಂಸ್ಥಾಪಕರು ಆಗಿನ ಸೆಂಟ್ರಲ್ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾದ ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಯವರು. ಆಗಿನ ವಿದ್ಯಾರ್ಥಿಗಳ ಬೆಂಬಲದಿಂದ, ಮುಂದಿನ ತಲೆಮಾರಿನ ವಿದ್ಯಾರ್ಥಿಗಳಿಗಾಗಿ ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘವು ಸ್ಥಾಪನೆಯಾಯಿತು. ಇವರು ಈ ಸಂಘವನ್ನು ಕಾಲೇಜಿನ ವಿದ್ಯಾರ್ಥಿಗಳಿಗೆ ಸಾಹಿತ್ಯ ರಚನೆಗೆ ಪ್ರೇರಣೆ, ಪ್ರೋತ್ಸಾಹ ನೀಡಲು, ಅವರ ಬರವಣಿಗೆಗೆ ಉತ್ತೇಜನ ನೀಡಲು ಪ್ರಾರಂಭಿಸಿದರು. ಉಪನ್ಯಾಸ, ಕಾವ್ಯವಾಚನ, ಗಮಕಸ್ಪರ್ಧೆ, ಕಂಠಪಾಠ, ಅಭಿನಯ, ವಾಚನಗಳು ಹಾಗೂ ಚರ್ಚಾಕೂಟ ಮೊದಲಾದ ಚಟುವಟಿಕೆಗಳು ಸಂಘದಿಂದ ಆಯೋಜಿಸಲ್ಪಡುತ್ತಿದ್ದವು. ಬರೆದ ಉತ್ತಮ ಬರಹಗಳಿಗೆ ಬಹುಮಾನ ನೀಡಿ ವಿದ್ಯಾರ್ಥಿಗಳನ್ನು ಹುರಿದುಂಬಿಸುತ್ತಿದ್ದರು. ಅನ್ಯಸಾಹಿತ್ಯ, ಅನ್ಯಸಂಸ್ಕೃತಿ ಹಾಗೂ ಅನ್ಯ ಭಾಷೆ ಇವುಗಳ ಜೊತೆಜೊತೆಯಾಗಿ ಸಾಗುವುದಕ್ಕೆ ಕನ್ನಡ ಸಾಹಿತ್ಯ, ಕನ್ನಡ ಸಂಸ್ಕೃತಿ ಹಾಗು ಕನ್ನಡ ಭಾಷೆಯನ್ನು ಕಟ್ಟಬೇಕೆಂಬುದು 'ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ'ದ ಬಹುಮುಖ್ಯ ಆಶಯವಾಗಿತ್ತು.

'ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ'ವು 'ಪ್ರಬುದ್ಧ ಕರ್ಣಾಟಕ' ಎಂಬ 'ತ್ರೈಮಾಸಿಕ' ಪತ್ರಿಕೆಯನ್ನು ಪ್ರಾರಂಭಿಸಿತು. ಇದರ ೧೩ ಸಂಪುಟಗಳಲ್ಲಿ ಸಂಶೋಧನೆಗೆ ಸಂಬಂಧಿಸಿದ ಬರಹ, ಶಾಸ್ತ್ರಗ್ರಂಥ ಸಂಪಾದನೆ, ಕಥೆ-ವಿಮರ್ಶೆ, ಗ್ರಂಥ ಸಂಪಾದನೆ, ನಾಟಕ, ಸಾಮಾಜಿಕ ಸಮಸ್ಯೆಗಳನ್ನೊಳಗೊಂಡ ಲೇಖನಗಳಿದ್ದವು. ಇವು ಆಧುನಿಕ ಸಾಹಿತ್ಯವನ್ನು ಶ್ರೀಮಂತಗೊಳಿಸಿ, ಭಾಷೆಯನ್ನು, ಸಾಹಿತ್ಯವನ್ನು ಪ್ರೀತಿಸುವಂತೆ ಮಾಡಿದವು. ವಸಾಹತುಶಾಹಿಯ ಪ್ರಭಾವದ ಆ ಕಾಲದಲ್ಲಿ ಕನ್ನಡಿಗರಿಗೆ ಅಂತಹ ಒಂದು ಸಾಹಿತ್ಯ ಪತ್ರಿಕೆಯ ಅವಶ್ಯಕತೆ ಖಂಡಿತವಾಗಿಯೂ ಇತ್ತು. ಎ.ಆರ್. ಕೃಷ್ಣಶಾಸ್ತ್ರಿಗಳು "ಹಲವು ಕಾರಣಗಳಿಂದ ಕನ್ನಡವನ್ನು, ಕನ್ನಡವಾಡುವವರನ್ನು, ಬರೆಯುವವರನ್ನು, ಓದುವವರನ್ನು, ಓದಿಸುವವರನ್ನು ಮಟುಕಿ ಮಟುಕಿ ಅವರಲ್ಲಿ ಒಂದು ಕೀಳು ಭಾವನೆ ಉಂಟಾಗುವಂತೆ ಆಗಿದೆ. ಆದ್ದರಿಂದ ಸದ್ಯಕ್ಕೆ ಕನ್ನಡ ಬದುಕಿರುವಂತೆ ನೋಡಿಕೊಳ್ಳಬೇಕು. ಅದು ಕನ್ನಡ ವಿದ್ಯಾರ್ಥಿಗಳ ಕರ್ತವ್ಯ. ಕರ್ನಾಟಕ ಸಂಘಗಳ ಕರ್ತವ್ಯ. ಇಂದು ವಿದ್ಯಾರ್ಥಿಗಳಾಗಿರುವವರು ಮುಂದೆ ಸರ್ಕಾರದ ಅಧಿಕಾರಿಗಳಾಗಿ, ದೇಶನಾಯಕರಾಗಿ, ಸಾರ್ವಜನಿಕರಾಗಿ ಕನ್ನಡದ ಬೆಂಬಲಕ್ಕೆ ನಿಂತರೆ, ಕನ್ನಡ ಮುಂದಕ್ಕೆ ಬರಲಾರದೇ?"[೩] ಎಂದು ಹೇಳುತ್ತಾರೆ. ಈ ಮಾತುಗಳು ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಯಲ್ಲಿ 'ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ'ದ ಧ್ಯೇಯವನ್ನೂ, ಉದ್ದೇಶವನ್ನೂ ಸ್ಪಷ್ಟಪಡಿಸುತ್ತವೆ.

೧೯೨೮ರ ಡಿಸೆಂಬರ್ ೧೫ರಂದು ವಿದ್ಯಾರ್ಥಿ ಕವಿ ಸಮ್ಮೇಳನವು ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದಿಂದ ಆಯೋಜಿಸಲ್ಪಟ್ಟಿತ್ತು. ಆ ಸಂದರ್ಭದಲ್ಲಿ ಎ. ಆರ್. ಕೃಷ್ಣಶಾಸ್ತ್ರಿಯವರು ಕುವೆಂಪು ಅವರ ಪ್ರತಿಭೆಯನ್ನು ಗುರುತಿಸಿ ಅವರನ್ನು ವಿದ್ಯಾರ್ಥಿ ಕವಿ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿದರು. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲಿ ಇದೊಂದು ಚಿರಸ್ಮರಣೀಯ ಘಟನೆ. ಹೀಗೆಯೇ ಈ ಸಂಘವು ಕುವೆಂಪು ಹಾಗೂ ಇತರ ಪ್ರತಿಭಾವಂತರು ತಮ್ಮ ಗುರಿ ಸಾಧಿಸಲು ಸಹಾಯ ಮಾಡಿತೆಂದು ಹೇಳಬಹುದಾಗಿದೆ. ಕನ್ನಡದ ಸಾಂಸ್ಕೃತಿಕ ಕೇಂದ್ರ ಹಾಗೂ ಅಧಿಕಾರದ ಕೇಂದ್ರ ಮೈಸೂರಾಗಿತ್ತು. ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘವು ಬೆಂಗಳೂರಿನಲ್ಲಿತ್ತು. ಇದು ಸಾಹಿತ್ಯದ, ಸಾಂಸ್ಕೃತಿಕ ಕೇಂದ್ರವಾಗಿ ಮಾರ್ಪಾಡಾಗಲಾರಂಭಿಸಿತು. ಎಲ್ಲೆಡೆಯೂ ಸಾಹಿತ್ಯದ ಚರ್ಚೆಗಳು ಹಾಗೂ ಸಾಂಸ್ಕೃತಿಕ ವಾಗ್ವಾದಗಳು ಪ್ರಾರಂಭವಾಗಿದ್ದವು.

'ಅಲ್ಲಿ-ಇಲ್ಲಿ ಕಂಡುಬರುವ ವಾಗ್ವಾದ ಅಥವ ಚರ್ಚೆಯಿಂದ ಹುಟ್ಟುವ ಸಾಂಸ್ಕೃತಿಕ ರಾಜಕಾರಣವನ್ನು ಸಂಕಥನ (Discourse) ಎಂದು ಕರೆಯಲಾಗಿದೆ'. ಈ ಪರಿಭಾಷೆಯನ್ನು ಕೊಟ್ಟವನು ಫ್ರೆಂಚ್ ತತ್ವಜ್ಞಾನಿ ಮಿಶೆಲ್ ಫೂಕೋ.

ಇಲ್ಲಿ ರಾಜಕೀಯವೆಂದರೆ, ರಾಷ್ಟ್ರವನ್ನು ಕಟ್ಟುವ ರಾಜಕಾರಣವಾಗಿದೆ. 'ಪ್ರಬುದ್ಧ ಕರ್ಣಾಟಕ' ಎಂಬ ಈ ಪತ್ರವನ್ನು ಕೇಂದ್ರವಾಗಿರಿಸಿಕೊಂಡು ಸಾಂಸ್ಕೃತಿಕವಾಗಿ ಚರ್ಚಿಸಿಕೊಳ್ಳುವುದು ಈ ಅಧ್ಯಯನದ ಆಶಯವಾಗಿದೆ. ೧೯೩೭ರಲ್ಲಿ ಮೈಸೂರು ವಿ.ವಿ.ವು 'ಪ್ರಬುದ್ಧ ಕರ್ಣಾಟಕ'ವನ್ನು ಪ್ರಕಟಿಸಲಾರಂಭಿಸಿತು. ಆದರೆ, ಈ ಅಧ್ಯಯನದಲ್ಲಿ ಅದಕ್ಕೆ ಮೊದಲಿನ ಸಂಚಿಕೆಗಳನ್ನು ಮಾತ್ರ ಅಂದರೆ, ೧೯೧೯ರಿಂದ ೧೯೩೭ರವರೆಗಿನ ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ ಅಧೀನದಿಂದ ಪ್ರಕಟವಾದ ಸಂಚಿಕೆಗಳ ಬಗ್ಗೆ ಮಾತ್ರ ಅಧ್ಯಯನ ನಡೆಸಲಾಗಿದೆ ಎಂದೂ,

---

೩. ಕಾಲೇಜ್ ಬರವಣಿಗೆ-ಮೊದಲನೆಯ ಆವರ್ತ-ಸಂಪಾದಕರು. ಈಪಿ.ರಾಜರತ್ನಂ-ಪ್ರಕಟಣೆ ಸೆಂ.ಕಾ.ಕ.ಸಂ., ಬೆಂಗಳೂರು - ಡಿಸೆಂಬರ್-೧೯೫೩ ಪು.ಸಂ. ೧೦

ನಂತರದ ಲೇಖನಗಳ, ಸಂಚಿಕೆಗಳ ವಿಚಾರಗಳನ್ನು ಈ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ.

ಈವರೆಗೂ ಕನ್ನಡ ಸಾಹಿತ್ಯವನ್ನು ನಾಲ್ಕು ಮುಖ್ಯವಾದ ವಿಧಾನಗಳಲ್ಲಿ ಆಧ್ಯಯನ ಮಾಡಲಾಗಿದೆ. ಅವು :

೧. ಚಾರಿತ್ರಿಕ ವಿಧಾನ  ೨. ರಸನಿಷ್ಠ ವಿಧಾನ  ೩. ಕೃತಿನಿಷ್ಠ ವಿಧಾನ  ೪. ಮೌಲ್ಯನಿಷ್ಠ ವಿಧಾನ [೪]

ಬಹಳಷ್ಟು ಕಡೆಗಳಲ್ಲಿ ಒಂದೇ ಅಧ್ಯಯನ ವಿಧಾನಕ್ಕಿಂತ ಹೆಚ್ಚಾಗಿ ಎರಡು ಅಥವ ಮೂರು ವಿಧಾನಗಳನ್ನು ಒಟ್ಟಿಗೆ ಅಳವಡಿಸಿಕೊಳ್ಳಲಾಗಿದೆ.

'ಚಾರಿತ್ರಿಕ ಅಧ್ಯಯನ' ವಿಧಾನವು ಸಾಹಿತ್ಯ ಮತ್ತು ಚರಿತ್ರೆಯನ್ನು ಎರಡು ವಿಭಿನ್ನ ಶಿಸ್ತುಗಳಾಗಿ ಪರಿಗಣಿಸುತ್ತದೆ. ಅದು ಸಾಹಿತ್ಯದ ಅನನ್ಯತೆಯನ್ನು ಒಪ್ಪಿಕೊಂಡರೂ ಸಾಹಿತ್ಯ ಕೃತಿಗಳನ್ನು ಚಾರಿತ್ರಿಕ ಸಂದರ್ಭದಲ್ಲಿಟ್ಟು ವರ್ತಮಾನಕ್ಕೆ ಬರಿಗೈಯಲ್ಲಿ ಮರಳುತ್ತವೆ. ಹೀಗಾಗಿ ಒಂದು ಸಂಸ್ಕೃತಿಯನ್ನು ಸಮಗ್ರವಾಗಿ ಗ್ರಹಿಸುವ ನಿಟ್ಟಿನಲ್ಲಿ ಈ ವಿಧಾನವು ಸೋಲುತ್ತದೆ.

'ರಸನಿಷ್ಠ ಮಾದರಿಯ ಅಧ್ಯಯನ'ವು ಒಂದು ಕೃತಿಯಲ್ಲಿರುವ 'ಭಾವೋಪಯೋಗಿ'ಯಾದಂಥ ಅಂಶಗಳಿಗೆ ಮಾತ್ರವೇ ಪ್ರಾಧಾನ್ಯತೆಯನ್ನು ನೀಡುತ್ತದೆ. ಹೀಗೆ ಗ್ರಹಿಸುವ ಪ್ರಕ್ರಿಯೆಯಲ್ಲಿಯೇ ಸಾಹಿತ್ಯವನ್ನು ಒಂದು 'ವಿರಾಟ್ ರಚನೆ' [೫] ಎಂದು ಪರಿಗಣಿಸುತ್ತಾರೆ. ಹೀಗೆ ಪರಿಗಣಿಸಿದಾಗ ಸಾಹಿತ್ಯದ ಉತ್ಪಾದನೆಗೆ ಕಾರಣವಾಗುವ ಬಹಳ ಮುಖ್ಯವಾದ ಸಾಮಾಜಿಕ ಸಂಗತಿಗಳು ಕಳೆದುಹೋಗಿಬಿಡಬಹುದಾದ ಅಪಾಯವಿರುತ್ತದೆ. ಆದ್ದರಿಂದ ರಸನಿಷ್ಠ ವಿಧಾನ ಆಳದಲ್ಲಿ ಸಮುದಾಯ ಮತ್ತು ಸಾಹಿತ್ಯದ ನಡುವೆ ಒಂದು ಕಂದರವನ್ನು ಸೃಷ್ಟಿಸುತ್ತದೆ.

'ಕೃತಿನಿಷ್ಠ ವಿಧಾನದ ಅಧ್ಯಯನ'ವು ನವ್ಯರ ಕಾಲಘಟ್ಟದಲ್ಲಿ ಬಳಕೆಗೆ ಬಂದಿತು. ಈ ವಿಧಾನವು ಕೃತಿಗೆ ಪ್ರಾಮುಖ್ಯತೆಯನ್ನು ನೀಡುವ, ಆ ಮೂಲಕ ಅದಕ್ಕೊಂದು ವೈಜ್ಞಾನಿಕ ಶಿಸ್ತನ್ನು ದಕ್ಕಿಸಿಕೊಡುವ ಹಠವನ್ನು ತೊಡುತ್ತದೆ. ಆದರೆ ಕೃತಿನಿಷ್ಠ ವಿಧಾನ **'Context'**ನ್ನು ನಿರ್ಲಕ್ಷಿಸುವ ಮೂಲಕ ಪಠ್ಯದ ಬಹುಮುಖೀ ಆಯಾಮಗಳನ್ನು ನಿರ್ಲಕ್ಷಿಸುತ್ತದೆ. ಆದ್ದರಿಂದ ಈ ವಿಧಾನವು ಸಂಸ್ಕೃತಿ ಕಥನವು ಸೃಷ್ಟಿಯಾಗಲು ಕಾರಣವಾಗುವ ಅನೇಕ ಆಯಾಮಗಳನ್ನು ಕಡೆಗಣಿಸಿ ಬಿಡುತ್ತದೆ.

'ಮೌಲ್ಯನಿಷ್ಠ ಅಧ್ಯಯನ ವಿಧಾನ'ವು ಕೃತಿಯಲ್ಲಿ ಪ್ರಧಾನವಾಗಿ ಕಂಡುಬರುವ ಯಾವುದೋ ಒಂದು ಮೌಲ್ಯಕ್ಕೆ ಆದ್ಯತೆಯನ್ನು ನೀಡುತ್ತಾ ತನಗರಿವಿಲ್ಲದಂತೆಯೇ ಕೃತಿಯಲ್ಲಿ ಕೇಂದ್ರ ಮತ್ತು ಪರಿಧಿಗಳೆಂಬ ಅಂತರವನ್ನು ಸೃಷ್ಟಿಸಿಕೊಂಡು ಬಿಡುತ್ತದೆ. ಹೀಗಾಗಿ ಕೃತಿಯ ಅಂಚಿನಲ್ಲಿರುವ ಅನೇಕ ಸಂಗತಿಗಳು ಅವಗಣನೆಗೆ ಒಳಗಾಗುವ ಸಾಧ್ಯತೆಗಳಿರುತ್ತವೆ.

**ಆದರೆ 'ಸಂಸ್ಕೃತಿಯ ಅಧ್ಯಯನ'ವು ಈ ಮಿತಿಗಳನ್ನು ಮೀರುವ ಹವಣಿಕೆಯಲ್ಲಿರುತ್ತದೆ. ಅದು ಚರಿತ್ರೆಯನ್ನು ಮುಖ್ಯ ಆಕಾರವಾಗಿ ಪರಿಗಣಿಸುವುದೇ ಇಲ್ಲ. ಏಕೆಂದರೆ 'Text & Context' ಎರಡೂ ಬೇರೆ ಬೇರೆ ಅಲ್ಲ ಎಂಬುದು ಈ ವಿಧಾನದ ಒಂದು ಮುಖ್ಯ ಗ್ರಹಿಕೆ.[೬] ಜೊತೆಗೆ ಸಂಸ್ಕೃತಿ ಅಧ್ಯಯನವು ಒಂದು ಪಠ್ಯದಲ್ಲಿರುವ ಎಲ್ಲಾ ರೀತಿಯ ವಿವರಗಳನ್ನು**

---

೪. ಕನ್ನಡ ಸಾಹಿತ್ಯ ಪ್ರತಿಭೆ ಮತ್ತು ಪ್ರಭುತ್ವ – ಡಾ. ಬಿ. ಯು. ಸುಮಾ – ಅಪ್ರಕಟಿತ ಪಿ.ಎಚ್‌ಡಿ ಪ್ರಬಂಧ – ೨೦೦೬

೫. ಮಾರ್ಕ್ಸ್‌ನ ದೃಷ್ಟಿಯಲ್ಲಿ ಕಲೆ, ಸಾಹಿತ್ಯ ಎಲ್ಲವೂ ಮೂಲಭೂತ ಅಗತ್ಯಗಳಿಗಿಂತ ಭಿನ್ನವಾದ ಮತ್ತು ಅವುಗಳು ಪೂರೈಕೆಯಾದ ನಂತರವೇ ಆಲೋಚಿಸಲ್ಪಡುವ ಸಂಗತಿಗಳಾದ್ದರಿಂದ ಅದನ್ನು Super structure ಎಂದು ಕರೆಯುತ್ತಾನೆ. – Oxford Dictionary of Philosophy p.no. 399 – Newyork - 1994.

ಸಮಾನವಾಗಿ ಗ್ರಹಿಸುತ್ತದೆ. ಆದ್ದರಿಂದ ಈ ವಿವರಗಳಲ್ಲಿ ಮುಖ್ಯ-ಅಮುಖ್ಯ ಎನ್ನುವ ವಿಭಜನೆಯೇ ಉಂಟಾಗುವುದಿಲ್ಲ. ಹೀಗೆ ಗ್ರಹಿಸಿದಾಗ ಒಂದು ಪಠ್ಯದ ಎಲ್ಲಾ ಆಯಾಮಗಳೂ ನಮಗೆ ದಕ್ಕಲಾರಂಭಿಸುತ್ತವೆ. ಸಂಸ್ಕೃತಿ ಅಧ್ಯಯನ ವಸಾಹತುಶಾಹಿ ಕಾಲಘಟ್ಟದ ಮುಖ್ಯ ಪರಿಭಾಷೆಗಳಾದ 'ಸಾಹಿತ್ಯ, ವಿಮರ್ಶೆ.......' ಮುಂತಾದ ಪರಿಭಾಷೆಗಳನ್ನೇ ಪ್ರಶ್ನಿಸುತ್ತದೆ. ಆದ್ದರಿಂದ ಈ ಅಧ್ಯಯನವು ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘದ 'ಪ್ರಬುದ್ಧ ಕರ್ಣಾಟಕ'ವನ್ನು 'ಸಾಂಸ್ಕೃತಿಕ ಕಥನ'ವೆಂದು ಪರಿಗಣಿಸುತ್ತದೆ.

ಈ ಸಾಂಸ್ಕೃತಿಕ ಕಥನದ ಸಾಂಸ್ಕೃತಿಕ ಪರಿಸರವನ್ನು ಚರಿತ್ರೆ ಎಂದೇ ಈ ಅಧ್ಯಯನ ನಿರ್ವಹಿಸಲು ಯತ್ನಿಸಿದೆ. 'ಸಾಂಸ್ಕೃತಿಕ ಅಧ್ಯಯನ'ದ ಬಹಳ ಮುಖ್ಯ ಉದ್ದೇಶ ಯಾವುದೇ ವಿಷಯದಲ್ಲಿನ ರಾಜಕಾರಣವನ್ನು ಹುಡುಕುವುದು ಹಾಗು ಅರಿಯುವುದಾಗಿದೆ. ಈ ಅಧ್ಯಯನ ಕೂಡ 'ಪ್ರಬುದ್ಧ ಕರ್ಣಾಟಕ'ವನ್ನು ಹೊಸ ಓದಿನ ಮೂಲಕ ಅದು ಮುಂದಿಡುವ ಸಾಂಸ್ಕೃತಿಕ ರಾಜಕಾರಣದ ಹಲವು ಮಾದರಿಗಳನ್ನು ಅರಿಯುವ ಪ್ರಯತ್ನ ಮಾಡುತ್ತದೆ.

ಸಂಸ್ಕೃತಿ ಅಧ್ಯಯನ ವಿಧಾನದಲ್ಲಿ ಕವಿತೆ, ಕಥೆ, ಕಾದಂಬರಿ, ವಿಮರ್ಶೆ, ಲೇಖನ, ಜೀವನಚರಿತ್ರೆ, ಹನಿಗವನ-ಮಿನಿಗವನ ಎಲ್ಲವನ್ನೂ ಕಥನವೆಂದೇ, ಸಾಹಿತ್ಯವೆಂದೇ ಗುರುತಿಸಲಾಗುತ್ತದೆ. ಇಲ್ಲಿ ಸಾಹಿತ್ಯಕ್ಕೂ, ಕಥನಕ್ಕೂ ಯಾವುದೇ ವ್ಯತ್ಯಾಸವಿಲ್ಲ. ಪ್ರಬುದ್ಧ ಕರ್ಣಾಟಕದ ಅಧ್ಯಯನಕ್ಕೆ ಈ ವಿಧಾನವನ್ನು ಆಯ್ಕೆಮಾಡಿಕೊಳ್ಳಲು ಕಾರಣ ಏನೆಂದರೆ ಮೇಲೆ ಹೇಳಿದ ಎಲ್ಲ ಪ್ರಕಾರಗಳೂ ಒಂದು ಸಂಸ್ಕೃತಿಯಲ್ಲಿ ರೂಪುಗೊಂಡ ಕಥನಗಳೇ ಆಗಿರುತ್ತವೆ. ಅದು ಕಾದಂಬರಿ, ಕಥೆ, ಪತ್ರಿಕೆ ಏನಾದರೂ ಆಗಿರಬಹುದು.

'ಪ್ರಬುದ್ಧ ಕರ್ಣಾಟಕ'ದ ೧೯೩೨ರವರೆಗಿನ ಸಂಚಿಕೆಗಳ ಸಾಂಸ್ಕೃತಿಕ ರಾಜಕಾರಣವನ್ನು ಅಧ್ಯಯನಕ್ಕೊಳಪಡಿಸಿ ಅದರಿಂದ ರೂಪುಗೊಂಡಿರುವ ಚಿಂತನೆಯನ್ನು ಪರಿಶೀಲಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಈ ಅಧ್ಯಯನವನ್ನು ನಾಲ್ಕು ನೆಲೆಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ :

**೧. ಪ್ರಬುದ್ಧ ಕರ್ಣಾಟಕದಲ್ಲಿ ರೂಪುಗೊಳ್ಳುತ್ತಿದ್ದ ಸಾಂಸ್ಕೃತಿಕ ವಾಗ್ವಾದದ ಸ್ವರೂಪ**

**೨. ಪ್ರಬುದ್ಧ ಕರ್ಣಾಟಕ ಕಟ್ಟುತ್ತಿದ್ದ ರಾಷ್ಟ್ರೀಯತೆಯ ಲಕ್ಷಣಗಳು**

**೩. ಸಾಮಾಜಿಕ ಬದಲಾವಣೆಗೆ ಪ್ರಬುದ್ಧ ಕರ್ಣಾಟಕದ ಪ್ರತಿಕ್ರಿಯೆ**

**೪. ಪ್ರಬುದ್ಧ ಕರ್ಣಾಟಕದಲ್ಲಿನ ಮಹಿಳೆಯ ಬಗೆಗಿನ ಸಂಕಥನಗಳು**

ಈ ರೀತಿಯ ವಿಭಜನೆಯನ್ನು ಕೇವಲ ಅಧ್ಯಯನದ ಅನುಕೂಲಕ್ಕಾಗಿ ಮಾತ್ರ ಮಾಡಿಕೊಂಡಿದೆಯೇ ಹೊರತು ಇದನ್ನು ಹೊರತುಪಡಿಸಿದರೆ ಇಲ್ಲಿರುವ ನಾಲ್ಕೂ ನೆಲೆಗಳನ್ನು ಒಂದಕ್ಕೊಂದು ಪೂರಕವಾಗಿ ಕೂಡ ನೋಡಬಹುದಾಗಿದೆ.

---

6. New Literary Histories – Author. Claire colebroole P.No.18. New Delhi –Manchester Press.

# ೨. ಪ್ರಬುದ್ಧ ಕರ್ಣಾಟಕದಲ್ಲಿ ರೂಪುಗೊಳ್ಳುತ್ತಿದ್ದ ಸಾಂಸ್ಕೃತಿಕ ವಾಗ್ವಾದದ ಸ್ವರೂಪ

ಈ ಅಧ್ಯಾಯದ ಉದ್ದೇಶ ಸೆಂ.ಕಾ.ಕ. ಸಂಘದ ಪ್ರಬುದ್ಧ ಕರ್ಣಾಟಕದಲ್ಲಿ ರೂಪುಗೊಳ್ಳುತ್ತಿದ್ದ ಸಾಂಸ್ಕೃತಿಕ ವಾಗ್ವಾದಗಳನ್ನು ಚರ್ಚಿಸುವುದಾಗಿದೆ. ಸಾಂಸ್ಕೃತಿಕ ವಾಗ್ವಾದಗಳ ಚರ್ಚೆ ಏಕೆ ಮುಖ್ಯವಾಗುತ್ತದೆಂದರೆ ಹತ್ತೊಂಬತ್ತನೆಯ ಹಾಗೂ ಇಪ್ಪತ್ತನೆಯ ಶತಮಾನವು ಭಾರತ ದೇಶದ ಮತ್ತು ಕನ್ನಡ ನಾಡಿನ ಪುನರುಜ್ಜೀವನದ ಒಂದು ಕಾಲಘಟ್ಟವಾಗಿತ್ತು. ಈ ಕಾಲಘಟ್ಟದಲ್ಲಿ ಪರಂಪರೆಯಿಂದ ಕಳಚಿಕೊಳ್ಳುವ ಅಥವಾ ಪರಂಪರೆಯನ್ನು ವಿಭಿನ್ನವಾಗಿ ನಿರ್ವಹಿಸುವ ಹಾಗೂ ಅನ್ಯದೇಶೀಯ ಸಾಂಸ್ಕೃತಿಕ ಆಕೃತಿಗಳನ್ನು ಈ ದೇಶದ ಸಾಂಸ್ಕೃತಿಕ ಆಕೃತಿಗಳಿಗೆ ಅಳವಡಿಸಿಕೊಳ್ಳುವ ಜಟಿಲವಾದ ಮತ್ತು ಸಂಕೀರ್ಣವಾದ ಪ್ರಕ್ರಿಯೆ ಭರದಿಂದ ಸಾಗುತ್ತಿತ್ತು. ಈ ಪ್ರಕ್ರಿಯೆಯಲ್ಲಿ ರೂಪುಗೊಳ್ಳುತ್ತಿದ್ದ ಸಾಂಸ್ಕೃತಿಕ ವಿನ್ಯಾಸದ ಮಾದರಿಗಳು ಹಾಗೂ ಅವು ಯಾವ ತಾತ್ವಿಕ ನೆಲೆಗಟ್ಟಿನ ಮೇಲೆ ಮೈತಾಳುತ್ತಿದ್ದವು ಎನ್ನುವುದನ್ನು ಪರಿಶೀಲಿಸುವುದು ಈ ಅಧ್ಯಾಯದ ಮುಖ್ಯ ಉದ್ದೇಶವಾಗಿದೆ.

"ಸಾಹಿತ್ಯ ಕೃತಿಗಳನ್ನು ಸಂಸ್ಕೃತಿಯೊಡನೆ ಇರಿಸಿ ನೋಡುವಾಗ ಸಂಸ್ಕೃತಿಯ ಭಾಗವಾಗಿ ಸಾಹಿತ್ಯಕೃತಿಯನ್ನು ಪರಿಗಣಿಸುವ ದೃಷ್ಟಿಯೊಂದು ಕಡೆ ಬಳಕೆಯಲ್ಲಿದ್ದರೆ, ಸಂಸ್ಕೃತಿಗೆ ಪೂರಕವಾಗಿ ಸಾಹಿತ್ಯ ಕೃತಿಗಳನ್ನು ವಿವರಿಸುವ ಬಗೆ ಇನ್ನೊಂದು. ಏನೇ ಇರಲಿ ಕೃತಿ ಜಗತ್ತಿನ ವಿವರಗಳನ್ನು ವ್ಯಾಖ್ಯಾನಿಸಲು ಸಾಂಸ್ಕೃತಿಕ ಭಿತ್ತಿಯ ವ್ಯವಸ್ಥಿತ ಬಳಕೆಯನ್ನು ಪ್ರತಿಪಾದಿಸುವಷ್ಟೇ ತೀವ್ರವಾಗಿ ಕೃತಿ ಜಗತ್ತಿನ ವಿವರಗಳ ಮೂಲಕವೇ ಸಾಂಸ್ಕೃತಿಕ ಭಿತ್ತಿಯ ಪುನಾರಚನೆ ಸಾಧ್ಯವೆನ್ನುವ ವಾದವೂ ಬಳಕೆಯಲ್ಲಿದೆ"[೧] ಎಂದು ಕೆ.ವಿ. ನಾರಾಯಣ್‌ರವರು ಸಾಹಿತ್ಯ ಕೃತಿಗಳ ಸಾಂಸ್ಕೃತಿಕ ಅಧ್ಯಯನವನ್ನು ಕುರಿತು ಹೇಳಿದ್ದಾರೆ.

"ಸಾಮಾನ್ಯವಾಗಿ ಎಲ್ಲರೂ ಅಂಗೀಕರಿಸಿರುವಂತೆ 'ಸಾಹಿತ್ಯ' ಪದವು 'ಕಲ್ಪನೆ' ಪ್ರಧಾನವಾದ ರಚನೆಗಳನ್ನು ಸೂಚಿಸುತ್ತದೆ. ಇವು ಈಗ ಬರೆಹ ಅಚ್ಚಿನ ರೂಪದಲ್ಲಿ ಓದುವಂತೆ ಇದ್ದರೂ, ಹಿಂದೆ ಬಾಯಿ ಮಾತಿನ ರೂಪದಲ್ಲೇ ಉಳಿದಿದ್ದವು. (ವಾಙ್ಞಯ ಎಂಬ ಪದ ಈ ಮಾತಿನ ಸ್ವರೂಪವನ್ನು ತೋರಿಸುತ್ತದೆ.) ಸಾಹಿತ್ಯ ಛಂದೋಬದ್ಧ ಗದ್ಯ ಅಥವಾ ನಾಟಕ ರೂಪದಲ್ಲಿರುತ್ತದೆ. ಇಂಗ್ಲೀಷಿನಲ್ಲಿ ಮತ್ತು ಯೂರೋಪಿಯನ್ ಭಾಷೆಗಳಲ್ಲಿ Literature ಎಂಬ ಪದಕ್ಕೆ (ಆ ಮೂಲಕ ಕನ್ನಡದಲ್ಲಿ ಸಾಹಿತ್ಯಕ್ಕೆ) ಈ ಅರ್ಥ ಬಂದದ್ದು ೧೯ನೇ ಶತಮಾನದ ನಂತರ, ಅದಕ್ಕಿಂತ ಹಿಂದೆ ಸಾಹಿತ್ಯಕ್ಕೆ ತೀರ ವಿಶಾಲವಾದ, ಸಡಿಲವಾದ ಅರ್ಥ. ಇದ್ದು ಕಲಾತ್ಮಕವಾಗಿರಲಿ ಮತ್ತು ಕೇವಲ ಬರಹವಾಗಿರಲಿ, ಭಾಷೆಯೊಂದರಲ್ಲಿ ರಚನೆಯಾದ ಎಲ್ಲ ಕೃತಿಗಳ ಮೊತ್ತ ಮತ್ತು ಅವುಗಳ ಅಧ್ಯಯನಕ್ಕೆ Literature ಎಂಬ ಪದ ಬಳಕೆಯಾಗುತ್ತಿತ್ತು"[೨] ಎಂಬುದು ಓ.ಎಲ್. ನಾಗಭೂಷಣಸ್ವಾಮಿಯವರ ಅಭಿಪ್ರಾಯವಾಗಿದೆ.

ಇಂದು, Literature (ಸಾಹಿತ್ಯ) ಎಂಬ ಪರಿಭಾಷೆಯನ್ನು 'ಸಾಂಸ್ಕೃತಿಕ ಕಥನ' ಎಂಬುದಾಗಿ ಬಳಸುತ್ತೇವೆ. ಏಕೆಂದರೆ 'ಸಾಹಿತ್ಯ' ಎನ್ನುವುದು ವಸಾಹತು ಕಾಲಘಟ್ಟದಲ್ಲಿ ನಮಗೆ ಪರಿಚಿತವಾದ ಪರಿಭಾಷೆ. ಅದು ದೇಶೀಯ ಕಥನಗಳ ಗುಣ ಲಕ್ಷಣಗಳನ್ನು ಸಮಗ್ರವಾಗಿ ಹಿಡಿಯಿತೆಂದು ಹೇಳಲು ಬರುವುದಿಲ್ಲ. ಪಾಶ್ಚಾತ್ಯರ ಸಾಹಿತ್ಯ ಕಲ್ಪನೆಯಲ್ಲಿ

---

೧. ಕೆ.ವಿ. ನಾರಾಯಣ - ಬೇರು, ಕಾಂಡ ಚಿಗುರು - ವಿವೇಕ ಪ್ರಕಾಶನ - ೧೯೯೭ ಪು.ಸಂ. ೨೩

೨. ಓ.ಎಲ್. ನಾಗಭೂಷಣಸ್ವಾಮಿ - ವಿಮರ್ಶೆಯ ಪರಿಭಾಷೆ - ಅಂಕಿತ ಪುಸ್ತಕ - ೧೯೯೮ - ಪು.ಸಂ. ೩೨೭

ಸೃಜನಶೀಲವಾದದ್ದು ಸಾಹಿತ್ಯ. ಕಾಲ್ಪನಿಕವಾದದ್ದು ಸಾಹಿತ್ಯ. ಯಾರೋ ಒಬ್ಬರಿಂದ ರಚಿಸಲ್ಪಟ್ಟಿದ್ದು ಸಾಹಿತ್ಯ. ದಾಖಲಾಗಿರುವುದು ಸಾಹಿತ್ಯ. ಪ್ರೊ. ಕಿ. ರಂ. ನಾಗರಾಜ್‌ರವರ ಪ್ರಕಾರ "ನಮ್ಮಲ್ಲಿ ಶಿಷ್ಟ ಮತ್ತು ಜನಪದ ಎಲ್ಲವೂ ಸಾಹಿತ್ಯ. ಸ್ಮೃತಿ ಮತ್ತು ಕೃತಿಯಿಂದ ಬಂದಿರುವವೆಲ್ಲವೂ ಕಥನಗಳು. ಶಾಸ್ತ್ರ, ಸಿದ್ಧಾಂತ, ವೇದ ಎಲ್ಲವೂ ಕಾವ್ಯಗಳು. ನಮ್ಮ 'ಸಾಹಿತ್ಯ'ದ ಕಲ್ಪನೆಯೇ ಬೇರೆ; ಪಾಶ್ಚಾತ್ಯರ ಸಾಹಿತ್ಯ ಕಲ್ಪನೆಯೇ ಬೇರೆ." [೩]

ಕಲ್ಬುರ್ಗಿಯಲ್ಲಿ ನಡೆದ ಕರ್ನಾಟಕ ಸಾಹಿತ್ಯ ಪರಿಷತ್ತಿನ ೧೪ನೆಯ ಸಮ್ಮೇಳನದ ಅಧ್ಯಕ್ಷರ ಆರಂಭ ಭಾಷಣದಲ್ಲಿ 'ಶ್ರೀ'ಯವರು "ಹೊಸ ಸಾಹಿತ್ಯವು ಹಳೆಯ ಸಾಹಿತ್ಯದ ಸಾರವನ್ನೂ, ಸಹಾಯವನ್ನೂ ಸ್ವೀಕಾರ ಮಾಡಿದರೂ, ಮತ ಪ್ರಸಾರಣೆಗಾಗಲೀ, ಪೂರ್ವ ಕಥಾನುವಾದಕ್ಕಾಗಲೀ ಬರೆಯತಕ್ಕುದಲ್ಲ: ನೂತನ ಜ್ಞಾನ ಪ್ರಸಾರಣೆಗಾಗಿ, ಪೂರ್ಣ ಕಲಾನುಭವಕ್ಕಾಗಿ, ಉತ್ತಮ ಜೀವನ ಕಾರ್ಯಾರಂಭ ಪ್ರೇರಣೆಗಾಗಿ ಬರೆಯತಕ್ಕುದು. ಪ್ರಪಂಚದಲ್ಲಿ ತಿಳಿದಿರುವ, ನುಡಿದಿರುವ, ನಡೆದಿರುವ ಉತ್ತಮ ವಿಷಯಗಳೆಲ್ಲವನ್ನೂ ಸಿಂಹಾವಲೋಕನದಿಂದ ತಾನು ಸ್ವಾನುಭವಕ್ಕೆ ತಂದುಕೊಂಡು ಹಾಗೆ ತಿಳಿಯಲಾರದ ಇತರರಿಗೆ ತಿಳಿಸತಕ್ಕುದು. ಇದಕ್ಕೆ ಒಂದು ನಾಡಲ್ಲ, ಒಂದು ಬೀಡಲ್ಲ; ಇದರ ಮೂಲ ಮಂತ್ರ 'ಉದಾರಚರಿತಾನಾಂ ತು ವಸುದೈವ ಕುಟುಂಬಕಂ'. ಈ ಹೊಸಮಾರ್ಗದ ಗ್ರಂಥಕರ್ತನು ಸ್ವತಂತ್ರನು; ಪದ್ಯಕ್ಕಿಂತಲೂ ಹೆಚ್ಚಾಗಿ ಗದ್ಯದಲ್ಲಿ ಕೆಲಸ ಮಾಡುವನು; ವಿಷಯಕ್ಕೆ ತಕ್ಕ ಶೈಲಿಯನ್ನು ಹೊಂದಿಸಿ ಸರ್ವರೂ ಅರ್ಥಮಾಡಿಕೊಳ್ಳುವಂತೆ ಬರೆಯುವನು. ಪ್ರಪಂಚದ ಎಲ್ಲಾ ಸಾಹಿತ್ಯಗಳಿಂದಲೂ ಮಾದರಿಗಳನ್ನೂ ವಿಷಯಗಳನ್ನೂ ಸ್ವೀಕರಿಸಿ ಯಾವ ಯಾವುದರಿಂದ ಕನ್ನಡಿಗರಿಗೆ ಉಪಯೋಗವುಂಟೆಂದು ತಿಳಿಯುವುದೋ ಅದೆಲ್ಲವನ್ನೂ ಕನ್ನಡಕ್ಕೆ ತಿರುಗಿಸುವನು" [೪] ಇದು ಸಾಹಿತ್ಯ ಹೇಗಿರಬೇಕೆಂಬುದರ ಬಗ್ಗೆ ಕನ್ನಡದ ಕಣ್ವ 'ಶ್ರೀ'ಯವರ ಅಭಿಮತವಾಗಿದೆ. ಹೊಸ ಸಾಹಿತ್ಯವೆಂದರೆ ಹೇಗಿರಬೇಕು, ಹೇಗೆ ಮಾರಕವಾಗದೇ ಪ್ರೇರಕವಾಗಬೇಕೆಂಬುದನ್ನು 'ಶ್ರೀ'ಯವರು ವಿವಿಧ ರೀತಿಯ ಸಾಹಿತ್ಯ ರಚನೆ ಅಗತ್ಯವನ್ನು ತಿಳಿಸುತ್ತಾ ಬಹಳ ಸೊಗಸಾಗಿ, ಸೂಕ್ತ ರೀತಿಯಲ್ಲಿ ಸಾಹಿತಿಗಳಿಗೆ, ಕವಿಗಳಿಗೆ, ಲೇಖಕರಿಗೆ ಮಾರ್ಗದರ್ಶನ ನೀಡಿದ್ದಾರೆ.

'ಸಾಹಿತ್ಯ ಎನ್ನುವುದು ತಂತ್ರದಲ್ಲಿ ಬರುವ ಮಹಾಮುದ್ರಾ. ಆ ಪುಟ್ಟ ಶರೀರದೊಳಗೆ ಇಡೀ ವಿಶ್ವ ಬಂದು ಅವತರಿಸುತ್ತದೆ. ಅದು ಸೀಮಿತ ಜ್ಞಾನವಲ್ಲ' [೫] ಎಂದು ಡಾ. ಡಿ. ಆರ್. ನಾಗರಾಜ್ ಹೇಳಿದ್ದಾರೆ. ಇಲ್ಲಿ ಸಾಹಿತ್ಯವನ್ನು ಸಾಂಸ್ಕೃತಿಕ ಕಥನ ಎಂಬ ದೃಷ್ಟಿಯಿಂದ ನಾವು ನೋಡುತ್ತಿರುವುದರಿಂದ ಈ ಸಂಸ್ಕೃತಿ ಕಥನವು ಇಡೀ ವಿಶ್ವವನ್ನೇ, ವಿಶ್ವದ ಚಿಂತನೆಗಳನ್ನೇ ಒಳಗೊಂಡ ಕಥನವೆಂದೂ, ಅದಕ್ಕೆ ಯಾವುದೇ ಸೀಮೆಯಿಲ್ಲವೆಂದು ಗ್ರಹಿಸಬಹುದಾಗಿದೆ.

೧೯೧೮ರಿಂದ ಪ್ರಾರಂಭವಾದ ಪ್ರಬುದ್ಧ ಕರ್ನಾಟಕದ ಸಂಚಿಕೆಗಳ ಲೇಖನಗಳಲ್ಲಿ, ಬರಹಗಳಲ್ಲಿ ಬಗೆಬಗೆಯ ಸಾಂಸ್ಕೃತಿಕ ವಾಗ್ವಾದಗಳ ಚರ್ಚೆಗಳು ನಡೆಯುತ್ತಿದ್ದವು. ಅಂತಹ ಸಾಂಸ್ಕೃತಿಕ ವಾಗ್ವಾದಗಳಲ್ಲಿ ಕೆಲವನ್ನು ಈ ಅಧ್ಯಾಯದಲ್ಲಿ ಪರಿಶೀಲಿಸಿಕೊಳ್ಳಲಾಗಿದೆ.

---

೩. ಕಿ.ರಂ. ನಾಗರಾಜ – ಜಾನಪದ ಮತ್ತು ಆಧುನಿಕ ಸಾಹಿತ್ಯ – ವರ್ತಮಾನದ ಸಾಹಿತ್ಯ ವಿಮರ್ಶೆ, ಸಂ. ಹೆಚ್.ಎಸ್. ರಾಘವೇಂದ್ರ ರಾವ್ – ಕರ್ನಾಟಕ ಸಾಹಿತ್ಯ ಅಕಾದೆಮಿ ೨೦೦೧, ಪು.ಸಂ. ೬೫೯ ರಿಂದ ೬೬೭.

೪. ಬಿ.ಎಂ.ಶ್ರೀ. – ಶ್ರೀ ಸಾಹಿತ್ಯ – ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ – ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ – ಮೈ.ವಿ.ವಿ. ೨೦೦೨ ಪು.ಸಂ. ೨೩೫

೫. ಡಾ. ಡಿ.ಆರ್. ನಾಗರಾಜ್ – ಸಾಹಿತ್ಯಕಥನ – ಅಕ್ಷರ ಪ್ರಕಾಶನ – ೨೦೦೬ – ಪು.ಸಂ. ೨೩೯

## ಪ್ರಬುದ್ಧತೆಯ 'ಪ್ರಬುದ್ಧ ಕರ್ಣಾಟಕ'

೧೯೧೮ರ ಆಗಸ್ಟ್ ತಿಂಗಳಿನಲ್ಲಿ 'ಬೆಂಗಳೂರು ಸೆಂಟ್ರಲ್ ಕಾಲೇಜ್'ನಲ್ಲಿ 'ಕರ್ಣಾಟಕ ಸಂಘ'ವು ಸ್ಥಾಪನೆಯಾಯಿತು. ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕೆಲಸ ಮಾಡಿ ಅನುಭವಿಗಳಾಗಿದ್ದ ಶ್ರೀ ಬಿ. ವೆಂಕಟನಾರಣಪ್ಪನವರು ಈ ಸಂಘದ ಮೊದಲ ಅಧ್ಯಕ್ಷರು. ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳು ಉಪಾಧ್ಯಕ್ಷರು. ಸಂಘದ ಕಾರ್ಯದರ್ಶಿ ಮಾತ್ರ ವಿದ್ಯಾರ್ಥಿಯೇ ಆಗಿರಬೇಕೆಂದು, ಸಂಘವು ವಿದ್ಯಾರ್ಥಿಗಳಿಗೆ ಒಂದು ಶಿಕ್ಷಣ ಕ್ಷೇತ್ರವಾಗಿರಬೇಕೆಂಬ ಉದ್ದೇಶದಿಂದ ಶ್ರೀ ಡಿ. ಗುಂಡೂರಾಯರನ್ನು ಕಾರ್ಯದರ್ಶಿಗಳನ್ನಾಗಿ ನೇಮಿಸಲಾಯಿತು. ಸಂಘವು ಸ್ಥಾಪನೆಯಾಗಿದ್ದು ಕನ್ನಡ ದೇಶದ ಚರಿತ್ರೆ ಭಾಷೆ ಹಾಗೂ ಸಾಹಿತ್ಯಗಳನ್ನು ವ್ಯಾಸಂಗ ಮಾಡುವ ಉದ್ದೇಶದಿಂದ. ರಾಮಕೃಷ್ಣ ಮಠದ ಸ್ವಾಮಿ ವಿದೇಹಾನಂದರ ಮಾತಿನಿಂದ ಪ್ರೇರಿತರಾಗಿ ಕರ್ಣಾಟಕ ಸಂಘದ ವತಿಯಿಂದ ಹೊರಬಂದ ಸಾಂಸ್ಕೃತಿಕ ಪತ್ರಿಕೆಗೆ ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳು 'ಪ್ರಬುದ್ಧ ಕರ್ಣಾಟಕ' ಎಂದು ಹೆಸರಿಡುತ್ತಾರೆ. ಉದಯಿಸುತ್ತಿರುವ ಸೂರ್ಯನ ಮುಂದೆ ಕಮಲಗಳು ಅರಳುತ್ತಿರುವ, ಅರಳಿರುವ ಚಿತ್ರವು ಪತ್ರಿಕೆಯ ಮುಖ ಪತ್ರದ ಚಿತ್ರವಾಗಿ ಆಯ್ಕೆಯಾಗಿದ್ದೂ ರಾಮಕೃಷ್ಣ ಮಠದಿಂದಲೇ ಪ್ರೇರಿತವಾದದ್ದು ಎಂದು ಎ.ಆರ್. ಕೃಷ್ಣಶಾಸ್ತ್ರಿಗಳೇ ಒಂದು ಕಡೆ ಹೇಳಿದ್ದಾರೆ.

'ಶ್ರೀ ಎ.ಆರ್. ಕೃಷ್ಣಶಾಸ್ತ್ರಿಗಳ ಕನಸಿನ ಕೂಸು ಹಾಗೂ ಬಹುಕಾಲ ಸಾಧನೆಯ ಫಲ 'ಪ್ರಬುದ್ಧ ಕರ್ಣಾಟಕ'. ಎಚ್ಚೆತ್ತ ಕನ್ನಡನಾಡಿನ ವಿಕಸಿತಗೊಂಡ ಕನ್ನಡ ಮನಸ್ಸಿನ ಸಂಕೇತ ಪ್ರಬುದ್ಧ ಕರ್ಣಾಟಕ. ಈ ಹೆಸರಿಟ್ಟು ತಮ್ಮ ನೂರು ಜನ ವಿದ್ಯಾರ್ಥಿಗಳಿಂದ ತಲಾ ಒಂದು ರೂಪಾಯಿ ಚಂದಾ ಸಂಗ್ರಹಿಸಿ ಕೃಷ್ಣಶಾಸ್ತ್ರಿಗಳು ಮೊದಲ ಸಂಚಿಕೆಯನ್ನು ಪ್ರಕಟಿಸಿದರು. ವಿನಾಯಕನ ಹಬ್ಬ, ದೀಪಾವಳಿ, ಸಂಕ್ರಾಂತಿ, ಉಗಾದಿ (ಅನಂತರ ಚೈತ್ರ, ಆಷಾಡ, ಆಶ್ವಯುಜ ಮತ್ತು ಪುಷ್ಯ ಎಂದು ಬದಲಾಯಿತು) ಎಂಬ ಹೆಸರಿನ ಸಂಚಿಕೆಗಳಾಗಿ ಹೊರಬರುತ್ತಿತ್ತು. ಪ್ರ.ಕ.ದ ಬಹುಮುಖ್ಯ ಕೆಲಸವೆಂದರೆ ಸಾಹಿತ್ಯ ಪತ್ರಿಕೆಯೊಂದರ ಮಾದರಿಯಾಗಿ ಅದರ ಔಚಿತ್ಯ ಹಾಗೂ ಸಹೃದಯತೆಯ ಜೊತೆಜೊತೆಗೆ ತೀಕ್ಷ್ಣತೆಗಳನ್ನೂ ಬರಹಗಳಲ್ಲಿ ರೂಪಿಸಿದ್ದು, ಎ.ಆರ್.ಕೃ ಅವರ ಮಾತಿನಂತೆ 'ಕಾವ್ಯ ಸೃಷ್ಟಿಗೆ ಬೇಕಾದ ಸಾಮಗ್ರಿಗಳನ್ನು ಒದಗಿಸಿಕೊಡುವುದು. ಒಂದು ಕಡೆ ವಿಮರ್ಶೆಯನ್ನೂ, ಮತ್ತೊಂದು ಕಡೆ ರಚನೆಯನ್ನೂ ಬೆಳೆಸುವುದು.' ೧೬ ವರ್ಷಗಳ ಕಾಲ ಪತ್ರಿಕೆಯ ಎಲ್ಲ ಹೊಣೆಯನ್ನೂ ಹೊತ್ತು ನಡೆಸಿದ್ದ ಶಾಸ್ತ್ರಿಗಳು ಆರ್ಥಿಕ ಅಡಚಣೆಯಿಂದಾಗಿ ಅದನ್ನು ನಿಲ್ಲಿಸುವ ಆಲೋಚನೆ ಮಾಡುತ್ತಿದ್ದಾಗ ಅದಕ್ಕೊಂದು ಭದ್ರವಾದ ನೆಲೆಯನ್ನು ಕಲ್ಪಿಸಿಕೊಟ್ಟವರು ಹಿರಿಯರಾದ ಬಿ.ಎಂ. ಶ್ರೀ.ಯವರು. ೧೯೩೨ರಲ್ಲಿ 'ಶ್ರೀ' ಅವರ ಪ್ರಯತ್ನದ ಫಲವಾಗಿ ಮೈ.ವಿ.ವಿ.ವು ಈ ಪತ್ರಿಕೆಯನ್ನು ವಹಿಸಿಕೊಂಡಿತು'[೧] ಎಂದು ಬಿ.ಎನ್. ಪ್ರಹ್ಲಾದ್ ಉಲ್ಲೇಖಿಸಿದ್ದಾರೆ.

ಪ್ರಬುದ್ಧ ಕರ್ಣಾಟಕವು ವಿದ್ಯಾರ್ಥಿಗಳು ಬರೆಯುವ ಲೇಖನಗಳಿಗಾಗಿ, ಅವರಿಗೆ ಉತ್ತೇಜನ ನೀಡಲಿಕ್ಕಾಗಿ ಆರಂಭವಾದರೂ ಕನ್ನಡದಲ್ಲಿ ಬರೆಯುವ ಮನಸ್ಸುಳ್ಳ ಹಿರಿಯರನ್ನೂ ತನ್ನ ಸಹಾಯಕ್ಕೆ ಕರೆದುಕೊಂಡಿತು. ಸೂಕ್ತವಾದ ಸಾಹಿತ್ಯವನ್ನು, ಕಥೆ, ಕವಿತೆ, ನಾಟಕ, ಕಾದಂಬರಿ, ವಸ್ತುಕೋಶ, ಕಾವ್ಯಾವಲೋಕನ ಮುಂತಾದವನ್ನು ಪ್ರಕಟಿಸಿ ತನ್ನ ಓದುಗರಿಂದ ಸೈ ಎನ್ನಿಸಿಕೊಂಡಿತು. ಎಲ್ಲಕ್ಕಿಂತ ಮಿಗಿಲಾಗಿ ಹೊಸ ವಿಮರ್ಶನ ಪದ್ಧತಿಯನ್ನು ಸ್ಥಾಪನೆ ಮಾಡಿತು. ಹೊಸಗನ್ನಡ ಸಾಹಿತ್ಯಾಭಿವೃದ್ಧಿ ವೃಕ್ಷವನ್ನು ನೀರೆರೆದು ಪೋಷಿಸಿತು.

---

೧. ಬಿ.ಎನ್. ಪ್ರಹ್ಲಾದ್, ಕಲೆ ಸಾಹಿತ್ಯ ನಿಯತ ಕಾಲಿಕಗಳು – ಉದಯಭಾನುಕಲಾಸಂಘ – ಬೆಂಗಳೂರು ದರ್ಶನ – ಪ್ರಸಂ. ಎಲ್.ಎಸ್. ಶೇಷಗಿರಿರಾಯರು – ಪು.ಸಂ. ೬೨೯ – ಪತ್ರಿಕೋದ್ಯಮ

"ಪ್ರಬುದ್ಧ ಕರ್ಣಾಟಕದಲ್ಲಿ ವ್ಯಕ್ತವಾಗಿ ಕೆಲಸ ಮಾಡಿದವರು ಆರಂಭದಲ್ಲಂತೂ ಒಬ್ಬರು: ಶ್ರೀ ಅಂಬಳೆ ಕೃಷ್ಣಶಾಸ್ತ್ರಿಗಳು : ಆಮೇಲೂ ಒಬ್ಬರು : ಶ್ರೀ ತಳುಕಿನ ವೆಂಕಣ್ಣಯ್ಯನವರು. ಇವರಲ್ಲಿ ಯಾವ ಒಬ್ಬರು ಕೆಲಸ ನಡೆಸಿದಾಗಲೂ ಮತ್ತೊಬ್ಬರ ಮನಸ್ಸು ಸದಾ ಜೊತೆ ಬೆರೆತು ಕಾರ್ಯದ ರೂಪವನ್ನು ನಿರ್ಧರಿಸುತ್ತಿತ್ತು. ಅವಿಭಕ್ತ ಕುಟುಂಬದ ವ್ಯವಹಾರದ ರೀತಿ ಈ ಪತ್ರಿಕೆಯ ಕೆಲಸ ಹಲವು ಮನಗಳ ಮಿಲನದಿಂದ ರೂಪುಗೊಂಡು ವೆಂಕಣ್ಣಯ್ಯನವರ ವ್ಯಕ್ತಿತ್ವದಲ್ಲಿ, ಶಾಸ್ತ್ರಿಗಳ ಕರ್ತೃತ್ವದಲ್ಲಿ ಸ್ಪಷ್ಟವಾದ ಆಕಾರಕ್ಕೆ ಬಂದಿತು. ಈ ಕಾರಣದಿಂದ ಅವರು ಮಾಡಿದರು ಇವರು ಮಾಡಿದರು ಎನ್ನುವುದಕ್ಕಿಂತ ಪತ್ರಿಕೆ ಮಾಡಿತು ಎನ್ನುವುದು ಎಲ್ಲ ಪತ್ರಿಕೆಗಳ ವಿಷಯದಲ್ಲಿ ಎಷ್ಟು ಮಾತ್ರವೋ ಅದಕ್ಕಿಂತ ಹೆಚ್ಚಾಗಿ ಈ ಪತ್ರಿಕೆಯಲ್ಲಿ ಉಚಿತ"[೨] ಎಂದು ಮಾಸ್ತಿಯವರು ನೆನೆಯುತ್ತಾರೆ.

ಈ ಪತ್ರಿಕೆಯ ಪ್ರಥಮ ಸಂಚಿಕೆ ಪ್ರಕಟವಾದುದು ಸಿದ್ಧಾರ್ಥಿ ಸಂವತ್ಸರದ ೧೯೧೯ರ ಯುಗಾದಿ ಸಂಚಿಕೆಯಾಗಿ. ೧೯೨೫ರಲ್ಲಿ ಮುದ್ದಣನ ಸಂಚಿಕೆ ಪ್ರಕಟವಾಯಿತು. ೧೯೨೮ರಲ್ಲಿ ಒಂದು ಹೆಚ್ಚು ಸಂಚಿಕೆ ಬಂದಿದೆ. ೧೯೩೨ರಲ್ಲಿ ಪತ್ರಿಕೆಯ ಆಡಳಿತ ಮೈ ವಿ.ವಿ.ದ ವಶಕ್ಕೆ ಬಂದಿತು. ಪ್ರಬುದ್ಧ ಕರ್ಣಾಟಕದ 'ಬೆಳ್ಳಿ ಹಬ್ಬ' ೧೯೪೫ರಲ್ಲಿ ಜರುಗಿ, ಅದರ ನೆನಪಿಗಾಗಿ 'ಬೆಳ್ಳಿಯ ಸಂಚಿಕೆ' ಪ್ರಕಟವಾಯಿತು. ೧೯೪೦ರಲ್ಲಿ ಪತ್ರಿಕೆಯ ಮುಖಪುಟದ ವಿನ್ಯಾಸ ಬದಲಾಯಿತು. ೧೯೬೯ರಲ್ಲಿ ಪತ್ರಿಕೆಯ 'ಚಿನ್ನದ ಹಬ್ಬ' ನಡೆಯಿತು.

"ಪ್ರಬುದ್ಧ ಕರ್ಣಾಟಕದಲ್ಲಿ ಲೇಖಕರು ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಒರೆಗೆ ಹಚ್ಚಿದ್ದಾರೆ; ಸೂಕ್ತ ಪ್ರತಿಫಲ ದೊರೆತು ಬೆಳೆದು ದೊಡ್ಡವರಾಗಿದ್ದಾರೆ. ಹೊಸಗನ್ನಡ ಕವಿತೆ, ವಿಮರ್ಶೆ, ಸಂಶೋಧನೆ, ಒಟ್ಟಾರೆ, ಕನ್ನಡ ಸಾಹಿತ್ಯದ ಭಾಷೆ, ಶೈಲಿಗಳ ಬೆಳವಣಿಗೆಯಲ್ಲಿ ಪ್ರಬುದ್ಧ ಕರ್ಣಾಟಕ ವಹಿಸಿದ ಪಾತ್ರ ಹಿರಿದಾದುದು ಎಂದು ಹೇಳಬಹುದು. ಒಳ್ಳೆಯ ಪರಂಪರೆಯನ್ನುಳ್ಳ ಈ ಪತ್ರಿಕೆ ಕನ್ನಡದ ಚಿರಕಾಲಿಕ ಪತ್ರಿಕೆಗಳಲ್ಲಿ ಅಗ್ರಗಣ್ಯವಾದುದು. ಆದರ್ಶಪ್ರಾಯವಾದುದು[೩] ಎಂದು ಕನ್ನಡ ವಿಶ್ವಕೋಶದಲ್ಲಿ ತಿಳಿಸಿದ್ದಾರೆ.

ಹೀಗೆ ಕನ್ನಡ ನಾಡು ನುಡಿ ಸಾಹಿತ್ಯ ಸಂಸ್ಕೃತಿಯ ಏಳಿಗೆಗಾಗಿ ದುಡಿದ ಪ್ರ.ಕ.ದ. ಬಗ್ಗೆ, ಅದರ ಕೆಲಸದ ಬಗ್ಗೆ ಎ.ಆರ್. ಕೃಷ್ಣಶಾಸ್ತ್ರಿಯವರು 'ನಮ್ಮಲ್ಲಿ ಬೆಳ್ಳಿಯಿಲ್ಲ, ಬಂಗಾರವಿಲ್ಲ. ಯಾವುದು ಇದೆಯೋ ಅದನ್ನು ನಿರ್ವಂಚನೆಯಾಗಿ ಕೊಡುತ್ತೇವೆ. ನಾವು ಮಾಡತಕ್ಕ ಕೆಲಸವನ್ನು ದೃಢದಿಂದಲೂ. ನಿರ್ವಂಚನೆಯಿಂದಲೂ ಮಾಡಿದರೆ ಸರಸ್ವತಿಯೂ ಲಕ್ಷ್ಮಿಯೂ ತಾವಾಗಿ ಸಹಾಯಕ್ಕೆ ಬಂದು ನಿಲ್ಲುವರೆಂದು ನಮಗೆ ಧೈರ್ಯವಿದೆ.'[೪] ಎಂದು ಹೇಳಿದ್ದಾರೆ. ಪ್ರಬುದ್ಧ ಕರ್ಣಾಟಕವು ಹೇಗಿರಬೇಕೆಂಬ ಅವರ ದೂರದೃಷ್ಟಿಯನ್ನು ಮೇಲಿನ ಮಾತುಗಳು ಸೂಚ್ಯವಾಗಿ ತಿಳಿಸುತ್ತದೆ. ಕನ್ನಡ ಭಾಷೆಯ ಮೇಲಿನ, ಕನ್ನಡ ಸಾಹಿತ್ಯದ ಮೇಲಿನ ಅವರ ಅಭಿಮಾನ ಪ್ರೀತಿ ಅನನ್ಯವಾದುದು, ಅಪ್ರತಿಮವಾದುದು.

'ಕನ್ನಡ ಸಾಹಿತ್ಯ – ಆಧುನಿಕ ಕನ್ನಡ ಸಾಹಿತ್ಯ ಯಾವ ಆಧುನಿಕ ಭಾರತೀಯ ಸಾಹಿತ್ಯದ ಮುಂದೂ ಸಂಕೋಚಪಟ್ಟುಕೊಂಡು ನಿಲ್ಲಬೇಕಾಗಿಲ್ಲ. ಇದು ನಾನು ಅಭಿಮಾನದಿಂದ ಆಡುವ ಮಾತಲ್ಲ; ಅನುಭವದಿಂದ ಆಡುವ ಮಾತು. ಆದರೆ ಹಲವು ಕಾರಣಗಳಿಂದ ಕನ್ನಡವನ್ನು, ಕನ್ನಡವಾಡುವವರನ್ನು, ಬರೆಯುವುದನ್ನು, ಓದುವವರನ್ನು, ಓದಿಸುವವರನ್ನು ಮಟುಕಿ ಮಟುಕಿ ಅವರಲ್ಲಿ ಒಂದು ಕೀಳುಭಾವನೆ ಉಂಟಾಗುವಂತೆ ಆಗಿದೆ. ವಸ್ತುಸ್ಥಿತಿ ಏನಾದರೂ

---

೨. ಮಾಸ್ತಿ ವೆಂಕಟೇಶ ಅಯ್ಯಂಗಾರ್ – ನಮ್ಮ ಹೊಸ ಸಾಹಿತ್ಯದ ಅಶ್ವಿನೀ ದೇವತೆಗಳು – ಪ್ರ.ಕ. ಬೆಳ್ಳಿ ಸಂಚಿಕೆ – ೧೯೪೫

೩. ಕರ್ನಾಟಕ – ಕನ್ನಡ ವಿಶ್ವಕೋಶ ೧೯೭೯ – ಕನ್ನಡ ಅಧ್ಯಯನ ಸಂಸ್ಥೆ ಮೈ.ವಿ.ವಿ. ಪು.ಸಂ. ೬೨೮

೪. ಎ.ಆರ್. ಕೃಷ್ಣಶಾಸ್ತ್ರಿಗಳು – ಪ್ರ.ಕ. ೧೯೧೯ ಮೊದಲ ಸಂಚಿಕೆ – ಸಿದ್ಧಾರ್ಥಿ ಸಂವತ್ಸರ ಯುಗಾದಿ ಸಂಚಿಕೆ

ಇರಲಿ, ಬದುಕಿದ್ದರೆ ಭಾಗ್ಯವನ್ನು ನೋಡೇವು; ಆದ್ದರಿಂದ ಕನ್ನಡ ಸದ್ಯಕ್ಕೆ ಬದುಕಿರುವಂತೆ ನೋಡಿಕೊಳ್ಳಬೇಕು. ಅದು ಕನ್ನಡ ವಿದ್ಯಾರ್ಥಿಗಳ ಕರ್ತವ್ಯ, ಕರ್ಣಾಟಕ ಸಂಘಗಳ ಕರ್ತವ್ಯ. ವಿದ್ಯಾರ್ಥಿಗಳಿಂದಲೇ ಸಂಘ. ಇಂದು ವಿದ್ಯಾರ್ಥಿಗಳಾಗಿರುವವರು ಮುಂದೆ ಸಾರ್ವಜನಿಕರಾಗಿ, ಸರ್ಕಾರದ ಅಧಿಕಾರಿಗಳಾಗಿ, ದೇಶ ನಾಯಕರಾಗಿ, ಕನ್ನಡದ ಬೆಂಬಲಕ್ಕೆ ನಿಂತರೆ ಅದು ಮುಂದಕ್ಕೆ ಬರಲಾರದೇ?'[೫] ಎಂದು ಪ್ರಶ್ನಿಸುತ್ತಾರೆ. ಆ ಪ್ರಶ್ನೆಯಲ್ಲಿಯೇ ಕನ್ನಡ ಖಂಡಿತಾ ಮುಂದೆ ಬರುತ್ತದೆ ಎಂಬ ಆಶಾವಾದವನ್ನು, ನಂಬಿಕೆಯನ್ನು ಕಾಣಬಹುದಾಗಿದೆ. ಎ.ಆರ್. ಕೃಷ್ಣಶಾಸ್ತ್ರಿಯವರ ಹಾಗೂ ವೆಂಕಣ್ಣಯ್ಯನವರ ಸ್ನೇಹವನ್ನು, ವಿಶ್ವಾಸವನ್ನೂ, ನಂಬಿಕೆಯನ್ನೂ ಕುರಿತು ಮಾಸ್ತಿಯವರು' ಇಬ್ಬರೂ ಋಜುಸ್ವಭಾವದವರು. ಇಬ್ಬರೂ ಕಾರ್ಯತತ್ಪರರು. ಇಬ್ಬರೂ ಸೇವಾನಿಷ್ಠರು ರೀತಿ ಬೇರೆಯಾದರೂ ಇಬ್ಬರ ಗುರಿ ಒಂದೇ ಆಗಿ ಇಬ್ಬರೂ ಒಂದು ದಾರಿಯಲ್ಲಿ ನಡೆಯಬೇಕಾಯಿತು. ಒಂದು ಗುರಿಯ ಸಾಧನೆಯಲ್ಲಿ ಈ ಎರಡು ಬಾಳು ಒಂದಾಗಿ ಬೆಳೆಯಿತು. ಈ ಯಮಳ ಜೀವನ ಹೊಸಗನ್ನಡದ ಅಶ್ವಿನೀದೇವತೆ ಆಯಿತು'[೬] ಎಂದು ಮೆಚ್ಚುಗೆಯ ಹೆಮ್ಮೆಯ ಮಾತುಗಳನ್ನು ಹೇಳಿದ್ದಾರೆ.

## ಸಂಸ್ಕೃತ ನಾಟಕಗಳು

ಅಮೆಚೂರ್ ನಾಟಕ ಮಂಡಲಿಯವರು ಬೆಂಗಳೂರಿನಲ್ಲಿ ನಡೆಸಿದ ಭಾರತೀಯ ನಾಟಕ ಸಮ್ಮೇಳನದಲ್ಲಿ ಚಿಕಾಗೋ ವಿಶ್ವವಿದ್ಯಾಲಯದ ಸಂಸ್ಕೃತ ಪ್ರೊಫೆಸರಾದ ವಾಲ್ಟರ್ ಯಾಜೀನ್ ಕ್ಲಾರ್ಕ್‌ರವರು ಸಂಸ್ಕೃತ ನಾಟಕಗಳ ಮೇಲೆ ಒಂದು ಉಪನ್ಯಾಸವನ್ನು ನೀಡುತ್ತಾರೆ. ಆ ಸಂದರ್ಭದಲ್ಲಿ ಪಾಶ್ಚಾತ್ಯ ಕಾವ್ಯ ವಿಮರ್ಶಕರಿಗೆ ಸಂಸ್ಕೃತ ನಾಟಕಗಳಲ್ಲಿ ಏನೇನು ಗುಣದೋಷಗಳು ಕಂಡುಬರುತ್ತವೆಂದು ಸೂಚಿಸುತ್ತಾರೆ. ಆ ಉಪನ್ಯಾಸದ ಮುಖ್ಯಾಭಿಪ್ರಾಯಗಳನ್ನು ಟಿ.ಎಸ್. ವೆಂಕಣ್ಣಯ್ಯನವರು ಕನ್ನಡೀಕರಿಸಿರುವುದೇ 'ಸಂಸ್ಕೃತ ನಾಟಕಗಳು'[೧] ಎಂಬ ಲೇಖನ.

'ಕಾವ್ಯೇಷು ನಾಟಕಂ ರಮ್ಯಂ; ನಾಟಕೇಷು ಶಕುಂತಲಾ' ಎಂಬ ಮಾತಿದೆ. ಕಾವ್ಯಗಳಲ್ಲೆಲ್ಲಾ ರಮ್ಯವಾದದ್ದು ನಾಟಕ. ನಾಟಕಗಳಲ್ಲಿ ರಮ್ಯವಾದದ್ದು ಶಕುಂತಲಾ ಎಂಬುದನ್ನು ಮೇಲಿನ ಮಾತುಗಳು ತಿಳಿಸುತ್ತವೆ. 'ಕೃತಾನುಕರಣಮೆ ನಾಟ್ಯಂ ಎಂದು ನಾಟಕದ ಜೀವಾಳವನ್ನೇ ಒಂದು ಸೂತ್ರದಲ್ಲಿ ಉಸಿರಿದ ಪಂಪ ನಾಟಕವನ್ನೇಕೆ ಬರೆಯಲಿಲ್ಲವೋ'[೨] ಎಂದು ಕೀರ್ತಿನಾಥ ಕುರ್ತಕೋಟಿಯವರು ಅಚ್ಚರಿ ವ್ಯಕ್ತಪಡಿಸುತ್ತಾರೆ. ಭಾರತದಲ್ಲಿ ನಾಟಕಗಳ ಬಗ್ಗೆ ಅಧ್ಯಯನ ನಡೆಸುವಾಗ ಮೊದಲು ಸಂಸ್ಕೃತ ನಾಟಕಗಳನ್ನು ಕುರಿತು ಆಭ್ಯಸಿಸಬೇಕಾಗುತ್ತದೆ.

'ನಾಟಕದ ಅಭ್ಯಾಸದಲ್ಲಿ ಗಮನಿಸಬೇಕಾದ ವಿಶಿಷ್ಟವಾದ ಒಂದು ಅಂಶ ನಾವು ನಾಟಕ ಎಂದು ಕರೆಯುವ ಸೃಷ್ಟಿ ಸಂಕೀರ್ಣವಾದದ್ದು. ನಾಟಕಕಾರ ಬರೆಯುವ ರಚನೆ ಅದರ ಒಂದು ಭಾಗ ಈ ರಚನೆ ಸಂಪೂರ್ಣವಾಗುವ ರಂಗಮಂದಿರದಲ್ಲೇ ಇದರಿಂದ ಈ ಸಾಹಿತ್ಯ ಪ್ರಕಾರದ ಅಭ್ಯಾಸ ತೊಡಕಿನದಾಗುತ್ತದೆ. ನಾಟಕವನ್ನು ಓದುವುದು ಅದರ ಅಭ್ಯಾಸದ ರೀತಿಯಲ್ಲ; ಕಾವ್ಯ, ಕಾದಂಬರಿ ಇತರ ಪ್ರಕಾರಗಳು ಭಾಷೆಯ ಮೂಲಕವೇ ತಮ್ಮ ಪರಿಣಾಮವನ್ನು

---

೫. ಎ.ಆರ್. ಕೃಷ್ಣಶಾಸ್ತ್ರಿ – ಅಭಿನಂದನ – ಕಾಲೇಜ್ ಬರವಣಿಗೆ – ಮೊದಲನೆಯ ಆವರ್ತ – ಪ್ರಕಟಣೆ – ಸೆಂ.ಕಾ.ಕ.ಸಂ. ೧೯೫೩ – ಪು.ಸಂ. ೧೦

೬. ಮಾಸ್ತಿ ವೆಂಕಟೇಶ ಅಯ್ಯಂಗಾರ್ – ನಮ್ಮ ಹೊಸ ಸಾಹಿತ್ಯದ ಅಶ್ವಿನಿದೇವತೆಗಳು – ಪ್ರಕ. ಬೆಳ್ಳಿ ಸಂಚಿಕೆ – ಪು.ಸಂ. ೩೩

---

೧. ಟಿ.ಎಸ್. ವೆಂಕಣ್ಣಯ್ಯ – ಸಂಸ್ಕೃತ ನಾಟಕಗಳು – ಪ್ರಕ. ೧೯೨೧ – ದುರ್ಮತಿ ಸಂವತ್ಸರ – ಆನೇ (ವಿನಾಯಕನ) ಸಂಚಿಕೆ.

೨. ಕೀರ್ತಿನಾಥ ಕುರ್ತಕೋಟಿ – ಯುಗಧರ್ಮ ಮತ್ತು ಸಾಹಿತ್ಯ ದರ್ಶನ – ಸಂ. ಗಿರಡ್ಡಿ ಗೋವಿಂದರಾಜ – ಕನ್ನಡ ಸಂಸ್ಕೃತಿ ಇಲಾಖೆ – ೨೦೧೦ – ಪು.ಸಂ. ೧೦೨

ಸಾಧಿಸಿದರೆ ನಾಟಕ ಮುಖ್ಯವಾಗಿ ಕಣ್ಣಿನ ಮೂಲಕ ತನ್ನ ಪರಿಣಾಮವನ್ನು ಸಾಧಿಸುತ್ತದೆ. ನಾಟಕವನ್ನು ಓದುವಾಗಲೂ ಅದರ ರಂಗಭೂಮಿಯ ಸ್ವರೂಪವನ್ನು ಕಲ್ಪಿಸಿಕೊಳ್ಳಬೇಕು'[೩]

ವಾಲ್ಟರ್ ಕ್ಲಾರ್ಕ್‌ರವರು ಸಂಸ್ಕೃತ ನಾಟಕವು ಗ್ರೀಕ್ ನಾಟಕದಿಂದ ಹುಟ್ಟಿದ್ದೆಂಬುದನ್ನು ಒಪ್ಪದೇ ಅದು ಹಿಂದೂ ದೇಶದಲ್ಲಿಯೇ ಹುಟ್ಟಿ ಪರಕೀಯ ಸಹಾಯವಿಲ್ಲದೆ ಬೆಳೆದಂತಿದೆಯೆಂದು ಹೇಳುತ್ತಾರೆ. ಸಂಸ್ಕೃತ ಸಾಹಿತ್ಯದಂತಹ ಸ್ವತಂತ್ರ ಸಾಹಿತ್ಯ, ಚೀನಾ ಸಾಹಿತ್ಯವನ್ನು ಬಿಟ್ಟರೆ ಮತ್ತಾವುದೂ ಇಲ್ಲವೆಂದು ಹೇಳುತ್ತಾರೆ. ಪಾಶ್ಚಾತ್ಯ ಕಾವ್ಯ ವಿಮರ್ಶಕನಿಗೆ ಸಂಸ್ಕೃತಸಾಹಿತ್ಯದಲ್ಲಿ ಕಂಡು ಬರುವ ವಿಶೇಷವೇನೆಂದರೆ, ನಾಟ್ಯಶಾಸ್ತ್ರದಿಂದ ಆರಂಭವಾಗಿ ದಶರೂಪಕ ಸಾಹಿತ್ಯ ದರ್ಪಣಗಳವರೆಗೆ ನಾಟಕ ಲಕ್ಷಣವನ್ನು ಬೋಧಿಸುವ ಗ್ರಂಥಗಳು ಧಾರಾಳವಾಗಿರುವುದು. ಆ ಲಕ್ಷಣ ಗ್ರಂಥಗಳೆಲ್ಲವೂ ಒಂದೇ ರಚನಾಕ್ರಮವನ್ನವಲಂಬಿಸಿದೆ. ಆ ರಚನಾ ಕ್ರಮವನ್ನೇ ಬೆಳೆಸುತ್ತಾ ಹೋಗಿರುವುದು. ಆದರೆ ನಾಟ್ಯಶಾಸ್ತ್ರವು ದೇವನಿರ್ಮಿತ ಅಥವಾ ಕಾಲ್ಪನಿಕವೆಂದು ನಂಬುವುದು ಅಸಾಧ್ಯವೆಂದು ಹೇಳುತ್ತಾರೆ.

ಸಂಸ್ಕೃತ ಲಾಕ್ಷಣಿಕರು ಕಥಾನಾಯಕನ ಮನೋಭಾವವನ್ನನುಸರಿಸಿ ನಾಟಕ ವಸ್ತುಗಳನ್ನು ಐದು ಮುಖ್ಯ ಭಾಗಗಳಾಗಿ ವಿಭಾಗಿಸಿದ್ದಾರೆ :

೧. ಆರಂಭ : ಕಥಾನಾಯಕನು 'ಈ ಉದ್ದೇಶವನ್ನು ನಾನು ಸಾದಿಸುತ್ತೇನೆ' ಎಂದು ಸಂಕಲ್ಪಿಸುವುದು.

೨. ಯತ್ನ : ಫಲಪ್ರಾಪ್ತಿಗಾಗಿ ಬೇಕಾದ ಪ್ರಯತ್ನಗಳನ್ನು ಮಾಡುವುದು.

೩. ಪ್ರಾಪ್ತಾಶಾ : ಫಲಪ್ರಾಪ್ತಿಗೆ ಆತಂಕಗಳಿದ್ದು ನಾಯಕನಿಗೆ ಫಲಪ್ರಾಪ್ತಿಯಾಗುವುದೆಂಬ ದೃಢವಾದ ನಂಬಿಕೆ ಇಲ್ಲದಿರುವುದು.

೪. ನಿಯತಾಪ್ತಿ : ಆತಂಕಗಳ ನಿವಾರಣೆಗೆ ಉಪಾಯವು ಗೊತ್ತಾಗಿ ಫಲಪ್ರಾಪ್ತಿಯಲ್ಲಿ ನಂಬಿಕೆ ಹುಟ್ಟುವುದು.

೫. ಫಲಾಗಮ : ಉದ್ದಿಷ್ಟ ಫಲಪ್ರಾಪ್ತಿ

ಫ್ರೀಟ್ಯಾಗೆ ಎಂಬ ಪ್ರಖ್ಯಾತ ಪಾಶ್ಚಾತ್ಯ ನಾಟಕ ವಿಮರ್ಶಕನು ಹೀಗೆಯೇ ವಸ್ತುವಿಭಜನೆ ಮಾಡಿರುವುದರಿಂದ ಪ್ರಾಚೀನ ಸಂಸ್ಕೃತ ಲಾಕ್ಷಣಿಕರು ಎಷ್ಟು ಸೂಕ್ಷ್ಮಬುದ್ಧಿಯುಳ್ಳವರೆಂದು ವಾಲ್ಟರ್ ಕ್ಲಾರ್ಕ್ ಪ್ರಶಂಸಿಸುತ್ತಾರೆ. ಆದರೆ ಲಾಕ್ಷಣಿಕರು ಸೂಚಿಸಿದ ೬೪ ಕಾವ್ಯದ ಅಂಗಗಳನ್ನು ಅವರು ತಿರಸ್ಕರಿಸುತ್ತಾರೆ. ಇಂತಹ ಲಕ್ಷಣಗಳಿಂದ ಸಂಸ್ಕೃತ ನಾಟಕಗಳ ಕಥಾಸಂವಿಧಾನದಲ್ಲಿಯೂ, ಲಕ್ಷಣದಲ್ಲಿಯೂ ಏಕರೂಪತೆಯುಂಟಾಗಿದೆ ಎನ್ನುತ್ತಾರೆ. ಕವಿಗಳು ಶ್ಲೇಷ, ಅನುಪ್ರಾಸ ಮೊದಲಾದ ಶಬ್ದಾಲಂಕಾರಗಳನ್ನು, ದೀರ್ಘವಾದ ಸಮಾಸ ಪದಗಳನ್ನು ಉಪಯೋಗಿಸಿ ಶೈಲಿಯೂ ಕ್ಲಿಷ್ಟವೂ, ದುರ್ಬೋಧವೂ ಆಗುವಂತೆ ಮಾಡಿದ್ದಾರೆ. ಇಂಥ ಅಂತಃಕರಣ ವೃತ್ತಿಗಳನ್ನು ಸುಲಭ ಸರಳವಾದ ಚಿತ್ತಾಕರ್ಷಕ ಶೈಲಿಯಲ್ಲಿ ವ್ಯಕ್ತಗೊಳಿಸುವುದೇ ನಾಟಕಕರ್ತನ ಕರ್ತವ್ಯವೇನೆಂಬುದು ಕಾಳಿದಾಸನಿಗೆ ಗೊತ್ತಿತ್ತೆಂದು ಪ್ರಶಂಸಿಸುತ್ತಾರೆ.

'ಸೃಷ್ಟಿಶಕ್ತರಾದ, ಪ್ರತಿಭಾಪೂರ್ಣರಾದ, ಸ್ವಲ್ಪ ಲಕ್ಷಣ ಸಂಪ್ರದಾಯಕ್ಕೆ ಕಟ್ಟುಬಿದ್ದರೂ, ಸ್ವಾತಂತ್ರ್ಯದ ತೇಜಸ್ಸುಳ್ಳವರಾದ ಕಾಳಿದಾಸನಾದಿ ನಾಟಕ ಕವಿಗಳ ನಾಟಕವೇ ಸಂಸ್ಕೃತದ ಉತ್ತಮ ನಾಟಕ. ಇದರಲ್ಲಿ ಎದ್ದು ಕಾಣುವುದು ಅಶ್ವಘೋಷನ

---

೩. ಪ್ರಸಂ. ಎಲ್.ಎಸ್. ಶೇಷಗಿರಿರಾಯರು – ಸಮಗ್ರ ವಿಮರ್ಶಾ ಸಾಹಿತ್ಯ ಸಂ. ೧ – ಕನ್ನಡ ಮತ್ತು ಸಂಸ್ಕೃತಿ ಇಲಾಖೆ – ೨೦೧೦ – ಪು.ಸಂ. ೧೨೯

ಬುದ್ಧದೇವ ಉಪದೇಶಗಳ ಪ್ರಚಾರ; ಭಾಸನ ವೈದಿಕ ಶ್ರದ್ಧೆ, ಅವನ ವೀರ್ಯ, ಸರಳತೆ, ನಾಟಕೀಯತೆ; ಶೂದ್ರನ ವೈದಿಕ ಮಿಶ್ರವಾದ ಸಾಮಾಜಿಕ ಚಿತ್ರ, ಗ್ರೀಕ್ ಛಾಯೆ; ಕಾಳಿದಾಸನ ಪರಿಪೂರ್ಣತೆ, ಸೌಂದರ್ಯದರ್ಶನ ಭೋಗಶೃಂಗಾರ ವೇದಾಂತ ತತ್ವ ಸಂಸಾರ ರಹಸ್ಯ, ಸಾತ್ವಿಕ ಪ್ರೇಮ; ಅಲ್ಲಲ್ಲಿ ಕೃತಕತೆ'[೪] ಇತ್ಯಾದಿಗಳು ಸಂಸ್ಕೃತ ನಾಟಕ ಸಾಹಿತ್ಯದ ವೈಶಿಷ್ಟ್ಯಗಳು ಎಂಬುದನ್ನು 'ಶ್ರೀ'ಯವರು ಗುರುತಿಸಿದ್ದಾರೆ.

ಕ್ಲಾರ್ಕ್‌ರವರ ಪ್ರಕಾರ ರಂಗಸ್ಥಳದಲ್ಲಿ ಅಭಿನಯಿಸಬೇಕಾದ ನಾಟಕವು ಭಾವೋದ್ರೇಕವನ್ನುಂಟು ಮಾಡುವಂತಿರಬೇಕು. ಸಂಸ್ಕೃತ ನಾಟಕಗಳ ಕಥೆ, ಕಥಾ ನಿರೂಪಣೆ, ಪಾತ್ರಗಳಿಗೆ ಸಂಭಂಧಿಸಿದ ವಿಷಯಗಳೆಲ್ಲಾ ಪುರಾಣೇತಿಹಾಸಗಳದ್ದಾಗಿದ್ದು ಬಹುಮಟ್ಟಿಗೆ ಗ್ರೀಕ್ ವಿಷಾದ ನಾಟಕಗಳನ್ನು ಹೋಲುತ್ತವೆಂದು ಹೇಳುತ್ತಾರೆ. 'ನಾಟಕ ಪ್ರೇಮಿಗಳು ಸಾಧಾರಣವಾಗಿ ಪ್ರಪಂಚದ ಮೂರು ಮುಖ್ಯ ನಾಟಕ ಸಾಹಿತ್ಯಗಳನ್ನು ನೋಡಬೇಕು. ಅವು ಯಾವುವೆಂದರೆ – ಸಂಸ್ಕೃತ, ಗ್ರೀಕ್ ಮತ್ತು ಇಂಗ್ಲಿಷ್.'[೫] 'ಶ್ರೀ'ಯವರ ಮೇಲಿನ ಮಾತಿನಲ್ಲಿ ಸಂಸ್ಕೃತವು ಮೊದಲ ಸ್ಥಾನದಲ್ಲಿದ್ದು ಅದು ಆ ನಾಟಕ ಸಾಹಿತ್ಯದ ಹಿರಿಮೆ–ಗರಿಮೆಗೆ ಸಾಕ್ಷಿಯಾಗಿದೆ.

ಕ್ಲಾರ್ಕ್ ಹೇಳುವಂತೆ 'ನಾಟಕವು ಸರ್ವತೋಮುಖವಾದ ಜೀವನವನ್ನು ಚಿತ್ರಿಸಬೇಕು. ಅತ್ಯಲ್ಪಭಾಗವನ್ನು ಚಿತ್ರಿಸಿ, ಅನೇಕ ಭಾಗಗಳನ್ನು ನಿಷ್ಕಾರುಣವಾಗಿ ತುಚ್ಛೀಕರಿಸುವುದು ಯೋಗ್ಯವಲ್ಲ. ಸಂಸ್ಕೃತ ನಾಟಕಗಳ ಇನ್ನೊಂದು ವಿಶೇಷಾಂಶ ಗದ್ಯಪದ್ಯಗಳ ಜೋಡಣೆ. ಬಹುಶ: ಅರ್ಧ ನಾಟಕವು ಪದ್ಯರೂಪವಾಗಿರುತ್ತದೆ.'

ನಾಟಕಗಳ ಸರಳವಾದ ಶೈಲಿಯು ಕ್ಷಿಷ್ಟವಾದ ಅತಿಶಯೋಕ್ತಿಗಿಂತಲೂ ಮೇಲೆಂಬುದನ್ನು ಜಗತ್ತಿನ ಕಾವ್ಯ ವಿಮರ್ಶಕರೆಲ್ಲರೂ ಒಪ್ಪುತ್ತಾರೆ. ಕಾಳಿದಾಸನ ಕಾವ್ಯಗಳಿಗೆ ಭಾರತೀಯರು ಕೊಡುವ ಗೌರವವನ್ನು ನೋಡಿದರೆ ಅವರೂ ಈ ಅಭಿಪ್ರಾಯವನ್ನು ಅನುಮೋದಿಸುವಂತೆ ಕಾಣುತ್ತದೆಂದು ಕ್ಲಾರ್ಕ್ ಅಭಿಪ್ರಾಯ ಪಡುತ್ತಾರೆ. ಪೂರ್ವದೇಶಗಳ ಜನರಿಗೆ ಸುಕುಮಾರ ಭಾವಗಳಲ್ಲಿಯೂ, ಪಾಶ್ಚಾತ್ಯರಿಗೆ ಉಜ್ವಲ ಭಾವೋದ್ರೇಕವನ್ನುಂಟು ಮಾಡುವ ಉಗ್ರವಾದ ಭಾವಗಳು ಪ್ರಿಯವಿರಬಹುದೆಂದು ಕ್ಲಾರ್ಕ್ ಭಾವಿಸುತ್ತಾರೆ. ಸಂಸ್ಕೃತ ನಾಟಕದ ಮತ್ತೊಂದು ವಿಶೇಷಾಂಶವೆಂದರೆ ನಾಟಕದಲ್ಲಿ ಚಿತ್ರಿತವಾಗುವ ಮಾನವ ಜೀವನದಲ್ಲಿ ಮನುಷ್ಯರು ಮಾತ್ರವೇ ಅಲ್ಲದೆ ದೇವತೆಗಳೂ ಅವರ ಸ್ಥಿತಿಗತಿಗಳ ವ್ಯತ್ಯಾಸಕ್ಕೆ ಕಾರಣರಾಗುತ್ತಾರೆ. ಕಷ್ಟ ನಿವಾರಣೆ ಮಾಡುತ್ತಾರೆ. ಪಾಶ್ಚಾತ್ಯರು ಜಗತ್ತನ್ನು ಸತ್ಯವೆಂದು ನಂಬಿ ಮಾನವ ಪ್ರಯತ್ನಕ್ಕೆ ಪ್ರಾಶಸ್ತ್ಯ ಕೊಟ್ಟರೆ, ಭಾರತದಲ್ಲಿ ದೇವತೆಗಳಿಗೆ, ದೈವೀಕತೆಗೆ ಪ್ರಾಶಸ್ತ್ಯ ಕೊಡುತ್ತಾರೆ. ಸಂಸ್ಕೃತ ನಾಟಕಗಳು ತಮ್ಮಲ್ಲಿನ ಕಾವ್ಯ ಸೌಂದರ್ಯದಿಂದ ಜನರ ಮನಸ್ಸನ್ನು ಉಚ್ಚಭಾವನೆ ಉನ್ನತಾದರ್ಶಗಳ ಕಡೆಗೆ ಆಕರ್ಷಿಸುವುದರಿಂದ ಅವು ಗೌರವಾರ್ಹವಾಗಿವೆ. ಭಾರತೀಯರು ತಮ್ಮ ಪ್ರಾಚೀನ ಆದರ್ಶವನ್ನು ಪುನರುಜ್ಜೀವನ ಮಾಡುವುದಾದರೆ ಶಾಂತಿ, ಸಮಾಧಾನ, ಸರಳತೆಯನ್ನು ಸಾಧಿಸಬಹುದು. ಇದು ಆಧುನಿಕ ಪಾಶ್ಚಾತ್ಯರ ಮೌಲ್ಯಗಳಿಗೆ ಸಮನಾಗಿರುವಂಥದ್ದು.

ಸಂಸ್ಕೃತ ನಾಟಕದ ಪಾತ್ರಗಳ ವಿಚಾರವಾಗಿ ಹೇಳುವುದಾದರೆ ಪಾತ್ರಗಳೆಲ್ಲವೂ ಗೊತ್ತಾದ ಮಾದರಿಯವು. ಗುಣವಿಶೇಷಗಳಿಂದ ಕೂಡಿ ಹೊಸ ಹೊಸ ಸನ್ನಿವೇಶಗಳಲ್ಲಿ ತಮ್ಮ ಸ್ವಭಾವವನ್ನು ತೋರುವ ವೈಲಕ್ಷಣಗಳನ್ನು ಉಳ್ಳವಲ್ಲ.

---

೪. ಬಿ.ಎಂ.ಶ್ರೀ. – ಶ್ರೀಸಾಹಿತ್ಯ – ಕನ್ನಡಿಗರಿಗೆ ಒಳ್ಳೆಯ ಸಾಹಿತ್ಯ – ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ – ಮೈ.ವಿ.ವಿ. ೨೦೦೨ – ಪು.ಸಂ. ೩೨೨, ೩೨೪

೫. ಅದೇ ಪು.ಸಂ. ೩೭೨

ರಂಗಸ್ಥಳದಲ್ಲಿ ಪಾತ್ರಗಳು ಸ್ವಾಭಾವಿಕವಾಗಿರಬೇಕೇ ಹೊರತು ಕೃತಕವಾಗಿ ಕಾಣಬಾರದು. ವಿವಿಧ ಸನ್ನಿವೇಶಗಳಲ್ಲಿ ಮನುಷ್ಯರು ಮಾತನಾಡುವಂತೆ ನಾಟಕದ ಪಾತ್ರಗಳೂ ಮಾತನಾಡಬೇಕು.

ಕ್ಲಾರ್ಕ್ ಸಂಸ್ಕೃತ ನಾಟಕಗಳ ಕೆಲವು ದೋಷಗಳನ್ನು ಹೀಗೆ ಪಟ್ಟಿ ಮಾಡುತ್ತಾರೆ :

೧. ನಾಟಕ ಕಥೆಯು ಕಾಲಕ್ರಮವನ್ನು ಅನುಕರಿಸುವ ರೂಢಿ.

೨. ನಾಟಕದ ವಸ್ತುವಿನ ಪ್ರತ್ಯೇಕ ಭಾಗಗಳಿಗೆ ಇರಬೇಕಾದ ಪರಿಮಾಣಕ್ಕೆ ಕವಿಗಳು ಗಮನ ಕೊಡದಿರುವುದು.

೩. ಅಧಿಕಾರಿತ ಪ್ರಾಸಂಗಿಕ ಇತಿವೃತ್ತಗಳಿಗೆ ಇರಬೇಕಾದ ಅವಿರೋಧತೆಗೆ ಗಮನ ಕೊಡದೇ ಅಪ್ರಾಸಂಗಿಕವಾದ ಉಪಕಥೆಗಳನ್ನು ಸೇರಿಸುವುದು.

ಭಾರತೀಯ ನಾಟಕದ ಪುನರುಜ್ಜೀವನಕ್ಕೆ ಸಂಸ್ಕೃತ ನಾಟಕ ಸಾಹಿತ್ಯದ ದೋಷಗಳನ್ನು ಬಿಡಬೇಕು. ಪಾಶ್ಚಾತ್ಯ ನಾಟಕಗಳನ್ನು ಅನುಕರಣೆ ಮಾಡದೇ ಸಹಾಯ ಪಡೆಯಬೇಕು. ಪ್ರಾಚೀನ ಸಂಸ್ಕೃತ ನಾಟಕದ ತಳಹದಿಯನ್ನು ಬಿಡಬಾರದು. ಉನ್ನತವಾದ ಪ್ರಾಚೀನಾದರ್ಶವನ್ನೇ ಮುಂದಿಟ್ಟುಕೊಂಡು ಕೆಲಸ ಮಾಡಬೇಕೆಂದು ಸಲಹೆ ನೀಡುತ್ತಾರೆ. ಅಂದರೆ ಸಂಸ್ಕೃತ ನಾಟಕಗಳು ಪ್ರಪಂಚದ ಬೇರೆಲ್ಲಾ ನಾಟಕಗಳಿಗಿಂತ ಮೇಲ್ದರ್ಜೆಯವು ಎಂಬುದನ್ನು ಕ್ಲಾರ್ಕ್ ತಿಳಿಸಿದ್ದಾರೆ. ಒಬ್ಬ ಪಾಶ್ಚಾತ್ಯ ದೇಶದ ಸಂಸ್ಕೃತ ವಿದ್ವಾಂಸನು ಭಾರತದ ಸಂಸ್ಕೃತ ನಾಟಕಗಳನ್ನು ಇಷ್ಟು ಆಳವಾಗಿ ಅಭ್ಯಸಿಸಿ ಅದರ ಅಭಿವೃದ್ಧಿಗಾಗಿ ಸಲಹೆ ಸೂಚನೆಗಳನ್ನು ನೀಡಿರುವುದು ಸ್ವಾಗತಾರ್ಹ. ಆ ಉಪನ್ಯಾಸವನ್ನು ಕನ್ನಡೀಕರಣಗೊಳಿಸಿದ ಟಿ.ಎಸ್. ವೆಂಕಣ್ಣನವರಕಾರ್ಯ ಬಹು ಶ್ಲಾಘನೀಯ. ನಾಟಕಗಳು ಭಾರತೀಯ ಸಾಂಸ್ಕೃತಿಕ ಜೀವನದ ಅವಿಭಾಜ್ಯ ಅಂಗಗಳಾಗಿದ್ದು ಈ ಲೇಖನವು ಸಾಂಸ್ಕೃತಿಕ ಕಥನದ ಸಾಲಿಗೆ ಸೇರುತ್ತದೆ. ಭಾರತೀಯ ಸಂಸ್ಕೃತಿಯ ಉನ್ನತಾದರ್ಶ, ಉಚ್ಚ ಭಾವನೆಗಳು, ದೈವೀಕ ಶಕ್ತಿಯ ಮೇಲಿನ ನಂಬಿಕೆ ಇವುಗಳೆಲ್ಲವೂ ಪ್ರಬುದ್ಧ ಕರ್ಣಾಟಕದ ಲೇಖನಗಳ ಮೂಲಕ ಓದುಗರ ಮನಸ್ಸನ್ನು ಸೇರಿ, ಅವರನ್ನೂ ಉನ್ನತಾದರ್ಶ ವ್ಯಕ್ತಿಗಳನ್ನಾಗಿ, ನಮ್ಮ ಸಂಸ್ಕೃತಿಯ ಬಗ್ಗೆ ಹೆಮ್ಮೆ ಪಡುವಂತಹವರನ್ನಾಗಿ ರೂಪಿಸುವಲ್ಲಿ ಸಫಲವಾಗುತ್ತಿತ್ತೆಂದು ಹೇಳಬಹುದಾಗಿದೆ.

## ವಸ್ತು ಕೋಶ

ಮೊದಲಿಗೆ ೧೯೧೯ನೇ ಸಿದ್ಧಾರ್ಥಿ ಸಂವತ್ಸರದ ೨ನೇ ಸಂಚಿಕೆಯಾದ ದೀಪಾವಳಿ ಸಂಚಿಕೆಯ 'ವಸ್ತುಕೋಶ'ವನ್ನು ನೋಡೋಣ. ಇದು 'ಪ್ರಬುದ್ಧ ಕರ್ಣಾಟಕದ' ಎರಡನೇ ವಸ್ತುಕೋಶವಾಗಿದೆ. ಆದರೆ ಮೂರನೇ ಸಂಚಿಕೆಯಾಗಿದೆ. ಮೊಟ್ಟಮೊದಲ ಸಿದ್ಧಾರ್ಥಿ ಸಂವತ್ಸರದ ೧ನೇ ಸಂಚಿಕೆಯಲ್ಲಿ 'ವಸ್ತುಕೋಶ'ವನ್ನು ಇನ್ನೂ ಪ್ರಾರಂಭಿಸಿರಲಿಲ್ಲ. ಇದು ಆರಂಭವಾದದ್ದು ೨ನೇ ಸಂಚಿಕೆಯಿಂದ.

'ಪ್ರಬುದ್ಧ ಕರ್ಣಾಟಕ'ವು ವರ್ಷದ ಮೂರು ಹಬ್ಬಗಳಲ್ಲಿಯೂ ಕನ್ನಡಿಗರ ಸೇವೆ ಮಾಡಿ 'ಮುಂದೆ ಏನಪ್ಪಣೆ?' ಎಂದು ವಿನಂತಿಸಿಕೊಳ್ಳುತ್ತಾ ಹೀಗೆಯೇ ಕೆಲಸ ಮಾಡಲು ಪೋಷಕರೂ, ಚಂದಾದಾರರೂ ತಮ್ಮ ಸಹಾಯವನ್ನು ಇದೇ ರೀತಿ ಮುಂದುವರೆಸಬೇಕೆಂದು ಪತ್ರಿಕೆಯ ಸಂಪಾದಕರು ಪ್ರಾರ್ಥಿಸಿರುತ್ತಾರೆ.

ನಂತರ ಸಂಘದಲ್ಲಿ ನಡೆದ ವೇ॥ ಸುಬ್ರಹ್ಮಣ್ಯ ಶಾಸ್ತ್ರಿಗಳು ಮ॥ರಾ॥ ಕರ್ಪೂರ್ ಶ್ರೀನಿವಾಸರಾಯರ ಅಧ್ಯಕ್ಷತೆಯಲ್ಲಿ "ಕನ್ನಡ ನಾಟಕಗಳು ಮತ್ತು ಅವುಗಳ ವ್ಯಾಸಂಗ" ಕುರಿತು ಮಾಡಿದ ಉಪನ್ಯಾಸ ಹಾಗೂ ವಿದ್ಯಾರ್ಥಿಯಾದ ಮ॥ರಾ॥ ಕೃಷ್ಣರಾಯರು "ಚಿತ್ರದುರ್ಗ ಮತ್ತು ಅದರ ನಾಯಕರು" ಎಂಬ ವಿಚಾರವಾಗಿ ಬರೆದು ಓದಿದ ಉಪನ್ಯಾಸಗಳು ಹೊಸಗನ್ನಡ ಸಾಹಿತ್ಯಕ್ಕೆ ಸ್ಫೂರ್ತಿದಾಯಕವಾಗಿವೆ.

ವಿದ್ಯಾರ್ಥಿ ಉಪನ್ಯಾಸದ ಅಗ್ರಾಸನ ವಹಿಸಿದ್ದ ಮ॥ರಾ॥ ಎಂ.ಎಸ್. ಪುಟ್ಟಣ್ಣನವರು ಮೈಸೂರು ಚರಿತ್ರೆಗೆ ಸಂಬಂಧಪಟ್ಟ ಅನೇಕ ಹೊಸ ವಿಷಯಗಳನ್ನು ಅಪ್ಪಣೆ ಕೊಡಿಸಿದರೆಂದು ಹೇಳುತ್ತಾರೆ. ವಿದ್ಯಾರ್ಥಿಗಳೂ, ವಿದ್ವಾಂಸರೂ ಪ್ರಯತ್ನಪಟ್ಟರೆ ಕ್ಷಿಪ್ರದಲ್ಲಿಯೇ ಅತ್ಯುತ್ತಮವಾದ ಮೈಸೂರು ಚರಿತ್ರೆಯೊಂದು ಸಿದ್ಧವಾಗುವುದರಲ್ಲಿ ಸಂಶಯವಿಲ್ಲವೆಂದು ಹೇಳುತ್ತಾರೆ. ಅದೇ ಸಂದರ್ಭದಲ್ಲಿ ಚಿತ್ರದುರ್ಗದ ಸಂಬಂಧವಾಗಿ ಕಣ್ಣಾರೆ ನೋಡಿ ತಿಳಿದುಕೊಳ್ಳಬೇಕಾದ ಸಂಗತಿಗಳನ್ನು ಮಾಯಾದೀಪದ (Magic Lantern) ಸಹಾಯದಿಂದ ತೋರಿಸಲು ಅನುಕೂಲ ಮಾಡಿಕೊಟ್ಟ ಬಿಷ್ಟೋಪಂತರವರಿಗೂ, ಮಲ್ಲಪ್ಪನವರಿಗೂ ಕೃತಜ್ಞರಾಗಿರುವುದಾಗಿ ಹೇಳುತ್ತಾರೆ.

ಹೀಗೆ ಹೊಸಗನ್ನಡ ಸಾಹಿತ್ಯ, ಇತಿಹಾಸ ಹಾಗೂ ಸಂಸ್ಕೃತಿಯ ವಿಕಾಸಕ್ಕೆ 'ಕರ್ಣಾಟಕ ಸಂಘ' ಹಾಗೂ 'ಪ್ರಬುದ್ಧ ಕರ್ಣಾಟಕ'ದ ಕೊಡುಗೆ ಮುಖ್ಯವಾಗಿದೆ. ಸಾಂಸ್ಕೃತಿಕ ಪುನರುಜ್ಜೀವನ ಪ್ರಕ್ರಿಯೆಗೆ ಗತವನ್ನು ಅರ್ಥಪೂರ್ಣವಾಗಿ, ವರ್ತಮಾನಕ್ಕನುಗುಣವಾಗಿ ಕಟ್ಟುವ ಕಾರ್ಯವು ಮಹತ್ವವನ್ನು ಪಡೆದುಕೊಳ್ಳುತ್ತದೆ.ಇದಕ್ಕೆ ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ಣಾಟಕವು ಪೂರಕವಾಗಿ ದುಡಿಯುತ್ತಿತ್ತು.

ನಾನು ಇಲ್ಲಿ ನೋಡುತ್ತಿರುವ ೨ನೆಯ ವಸ್ತುಕೋಶವು ೧೯೨೧ರ ದುರ್ಮತಿ ಸಂವತ್ಸರದ ೮ನೇ (ವಿನಾಯಕ) ಸಂಚಿಕೆಯ 'ಪ್ರಬುದ್ಧ ಕರ್ಣಾಟಕ'ದ್ದು. ದೇಶದ ಸ್ಥಿತ್ಯಂತರದ ಪರಿಣಾಮಗಳಿಂದಾಗಿ ಪ್ರಬುದ್ಧ ಕರ್ಣಾಟಕವು ಹಿಂದಿನ ಸಂಚಿಕೆಯಿಂದ ಸರಿಯಾಗಿ ಕೆಲಸ ಕಾರ್ಯಗಳನ್ನು ಮಾಡಲಾಗದೆ ಸೋಮಾರಿಯಾಗುತ್ತಿದ್ದನ್ನು ಕಂಡು ಸೆಂ.ಕಾ.ಕ.ಸಂಘದ ಅಧ್ಯಕ್ಷರೂ, ಉಪಾಧ್ಯಕ್ಷರೂ ಸರಿಯಾದ ಚಿಕಿತ್ಸೆಮಾಡಿದ್ದರಿಂದ ಸಂಘದ ಕೆಲಸವು ಎಂದಿಗಿಂತ ಮುಂಚೆಯೇ ಆರಂಭವಾಯಿತೆಂದು ಸಂಪಾದಕರು ಹೇಳುತ್ತಾರೆ.

ಎ.ಆರ್. ಕೃಷ್ಣಶಾಸ್ತ್ರಿಗಳು "ಮೈಸೂರು ಚರಿತ್ರೆಯ ಮೇಲೆ ಕಾದಂಬರಿಯನ್ನು ಬರೆಯಲು ಇರತಕ್ಕ ಸಾಮಗ್ರಿಗಳು" ಎಂಬ ವಿಷಯದ ಮೇಲೆ ಉಪನ್ಯಾಸ ಮಾಡುತ್ತಾರೆ. ಧಾರವಾಡದ ಆರ್.ಎಚ್. ದೇಶಪಾಂಡೆಯವರು ಅಂದು ಅಗ್ರಾಸನವನ್ನು ಅಲಂಕರಿಸಿರುತ್ತಾರೆ. ನಂತರ ಎಂ. ವೆಂಕಟೇಶಯ್ಯಂಗಾರ್ "ಜೀವನ ಮತ್ತು ಸಾಹಿತ್ಯ" ಎಂಬ ಉಪನ್ಯಾಸವನ್ನು ಮಾಡುತ್ತಾರೆ. ಡಿ. ವಿ. ಗುಂಡಪ್ಪನವರು ಹಿಂದೇ ಇದೇ ವಿಷಯದಲ್ಲಿ ಉಪನ್ಯಾಸ ಮಾಡಿದ್ದರೂ ಎರಡರ ನಡುವೆ ಬಹಳ ವ್ಯತ್ಯಾಸವಿದೆಯೆಂದು ಸಂಪಾದಕರು ತಿಳಿಸುತ್ತಾರೆ. ಇದರಿಂದ ಸೆಂ.ಕಾ.ಕ.ಸಂ.ಲ್ಲಿ ಒಂದೇ ವಿಷಯದ ಮೇಲೆ ಬಗೆ ಬಗೆಯ ರೀತಿಯ ಚರ್ಚೆಗಳು ವಾಗ್ವಾದಗಳಿಗೆ ಗ್ರಾಸವಾಗಿದ್ದವು. ಸಂಘಕ್ಕೆ ಹೊಸ ಗ್ರಂಥಗಳನ್ನು ಕಳುಹಿಸಿಕೊಟ್ಟ ಆಯಾ ಗ್ರಂಥಕರ್ತರು ಹಾಗೂ ಪ್ರಕಾಶಕರಿಗೂ ಸಂಘದ ಪರವಾಗಿ ಸಂಪಾದಕರು ಕೃತಜ್ಞತೆ ಅರ್ಪಿಸುತ್ತಾರೆ.

ಮತ್ತೊಂದು ಕಡೆ, ಬೇರೆ ಬೇರೆ ಭಾಷೆಯ ಸಾಹಿತ್ಯ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿಕೊಳ್ಳುವುದರ ಮೂಲಕ ಕನ್ನಡ ಸಾಹಿತ್ಯವನ್ನು ಪುನರುಜ್ಜೀವನಗೊಳಿಸುವ ಪ್ರಯತ್ನವನ್ನು ಕರ್ಣಾಟಕ ಸಂಘ ಮಾಡಿರುವುದಕ್ಕೆ ನಿದರ್ಶನಗಳಿವೆ.

| | ಗ್ರಂಥದ ಹೆಸರು | ಕರ್ತೃ/ಸಂಪಾದಕರು | ಮೂಲ/ಪ್ರಕಾಶಕರು |
|---|---|---|---|
| ೧. | ರಾಮಮೋಹನ ನಾಟಕ | ಎ. ಕೇಶವಯ್ಯ | ತೆಲುಗಿನ ಆದಿಪೂಡಿ ಸೋಮನಾಥ ರಾಯರ ಗ್ರಂಥ |
| ೨. | ಕೆಲವು ಸಣ್ಣಕಥೆಗಳು | ಶ್ರೀನಿವಾಸ | ಎಂ.ಎಸ್. ರಾವ್ ಕಂಪೆನಿ |
| ೩. | ಕಥಾಸರಿತ್ಸಾಗರ | ಚಿದಂಬರ ಪಂಡಿತರು | ಮಾಸಪತ್ರಿಕೆ |

ಕಥಾಸರಿತ್ಸಾಗರವನ್ನು ಚಿದಂಬರ ಪಂಡಿತರು ಬಹಳ ಸೊಗಸಾಗಿ ಕನ್ನಡೀಕರಿಸಿದ್ದಾರೆಂದು ಮೆಚ್ಚಿಗೆಯ ಮಾತುಗಳನ್ನು ಆಡಿದ್ದಾರೆ ಸಂಪಾದಕರು.

ಹೀಗೆ ವಸ್ತುಕೋಶವು ಸಂಘದ ಬಹುಮುಖಿ ಚಿಂತನೆಗಳಿಗೆ ಸಾಕ್ಷಿಯಾಗಿದೆ.

ನಾವು ನೋಡಲಿರುವ ಮೂರನೆಯ ವಸ್ತುಕೋಶವು ೧೯೨೮ ವಿಭವ ಸಂವತ್ಸರದ, ಪ್ರಬುದ್ಧ ಕರ್ಣಾಟಕ ೩೮ನೇ (ಕಾಮನ) ಸಂಚಿಕೆಯಾಗಿದ್ದು ಇದರ ಸಂಪುಟ ೧೦.

ಮೊದಲಿಗೆ, ಕರ್ಣಾಟಕ ಸಂಘದ ಮತ್ತೊಂದು ಸಾಧನೆ ಎಂದರೆ ಅಂದಿನ ಪ್ರಸಿದ್ಧ ವಿದ್ವಾಂಸರಿಂದ ಉಪನ್ಯಾಸಗಳನ್ನು ಹಾಗೂ ಸಾಹಿತ್ಯ ಸ್ಪರ್ಧೆಗಳನ್ನು ಏರ್ಪಡಿಸಿದ್ದು. ಕೆ. ಅನಂತರಾಮಯ್ಯ ಅವರು 'ಹೆಲನ್' ಎಂಬ ಗ್ರೀಕ್ ನಾಟಕದ ಮೇಲೆ ಎರಡು ಇಂಗ್ಲೀಷ್ ಉಪನ್ಯಾಸಗಳನ್ನು ಎ.ಆರ್. ಕೃಷ್ಣಶಾಸ್ತ್ರಿಗಳು 'ಭಾಸನ ಪ್ರತಿಮಾ ನಾಟಕ'ದ ಮೇಲೆ ಎರಡು ಕನ್ನಡ ಉಪನ್ಯಾಸಗಳು ಮಹತ್ವದ್ದಾಗಿವೆ. ಇನ್ನು ವರ್ಷದ ಆದಿಯಲ್ಲಿ ಏರ್ಪಡಿಸಿದ್ದ 'ಸಣ್ಣ ಕಥೆಗಳ ಸ್ಪರ್ಧೆ'ಗೆ ಕರ್ಣಾಟಕದ ವಿವಿಧ ಪ್ರಾಂತಗಳಿಂದ ೨೧ ವಿದ್ಯಾರ್ಥಿಗಳು ಕಥೆ ಕಳುಹಿಸಿದ್ದು, ಅವನ್ನು ಕವಿಭೂಷಣ ಬೆಟಗೇರಿ, ಕಡೆಂಗೋಡ್ಲು ಶಂಕರಭಟ್ಟರು ಮತ್ತು ಎಸ್.ವಿ. ರಂಗಣ್ಣ ಎಂಬುವ ವಿದ್ವಾಂಸರು ಪರೀಕ್ಷಿಸಿ ನೀಡಿದ ಸ್ಥಾನಗಳು ಹೀಗಿವೆ:

| ವಿದ್ಯಾರ್ಥಿ | ಕಥೆ | ಸ್ಥಾನ |
|---|---|---|
| ಇ.ಎ. ಭಾಸ್ಕರರಾಯ | ಕ್ಯಾಪ್ಟನ್ ಬಾಬಿನಾರಸಿಂಗಸನ್ | ಮೊದಲಸ್ಥಾನ |
| ವೈ. ಅಚ್ಯುತರಾಯ | ಒಂದು ಸಣ್ಣ ಕತೆ | ದ್ವಿತೀಯ ಸ್ಥಾನ |

ನಂತರ ಡಿಸೆಂಬರ್ ತಿಂಗಳಲ್ಲಿ ನಡೆದಿದ್ದೇ ಭಾರತ ವಾಚನ ಸ್ಪರ್ಧೆ. ಭಾಗವಹಿಸಿದ ವಿದ್ಯಾರ್ಥಿಗಳ ಸಂಖ್ಯೆ ೨೨. ಪರೀಕ್ಷಕರು ಡಾ॥ ಬಿ.ಎಲ್. ಮಂಜುನಾಥ, ವಿ. ಶ್ರೀನಿವಾಸರಾಯರು, ಎ.ಆರ್. ಕೃಷ್ಣಶಾಸ್ತ್ರಿಗಳು. ಫಲಿತಾಂಶ:

| ಸ್ಥಾನ | ವಿದ್ಯಾರ್ಥಿ |
|---|---|
| ಮೊದಲನೇ | ಎಸ್.ನ್. ನಾರಾಯಣಸ್ವಾಮಿ |
| ಎರಡನೇ | ಎಂ. ಹರಿನಾರಾಯಣ, ವೈ. ಎಸ್. ಶ್ರೀನಿವಾಸರಾವ್. |

ಇನ್ನು ಮೂರನೆಯ ಸ್ಪರ್ಧೆ 'ಕನ್ನಡ ಭಾಷಣ ಸ್ಪರ್ಧೆ' ಆಯೋಜಿಸಿದ್ದು ಫೆಬ್ರವರಿ ತಿಂಗಳಲ್ಲಿ, ಭಾಷಣಕ್ಕೆ ನೀಡಿದ ವಿಷಯಗಳು :

೧. ಮೈಸೂರು ಸಂಸ್ಥಾನದಲ್ಲಿ ಕನ್ನಡವೇ ಶಿಕ್ಷಣ ಭಾಷೆಯಾಗಬೇಕು.

೨. ಇಂಗ್ಲೀಷಿನ ಓದೇ ಇಂದಿನ ಅಶಾಂತಿಗೆಲ್ಲಾ ಕಾರಣ.

೩. ಹೊಸಕನ್ನಡ ಸಾಹಿತ್ಯದಲ್ಲಿ ಸ್ವಾತಂತ್ರ್ಯ

ಪರೀಕ್ಷಕರಾಗಿದ್ದವರು : ನವರತ್ನಂ ರಾಮರಾವ್, ಕೆ.ಎಚ್. ರಾಮಯ್ಯ, ಎಸ್.ಜಿ. ಶಾಸ್ತ್ರಿ, ವಿ. ಸೀತಾರಾಮಯ್ಯ.

| **ಫಲಿತಾಂಶ :** | **ಬಹುಮಾನ** | **ವಿದ್ಯಾರ್ಥಿ** |
|---|---|---|
| ಮೊದಲನೆ (ಸ್ವರ್ಣ ಪದಕ ಫ್ರೆಂಡ್ಸ್ ಯೂನಿಯನ್‌ನಿಂದ) | ವಿ. ವೆಂಕಟಾಚಾರ್ಯ | ಮೈ. ಮಹಾರಾಜಾ ಕಾಲೇಜು |
| ಎರಡನೇ | ಡಿ.ಆರ್. ರಾಮಯ್ಯ | ಸೆಂ.ಕಾಲೇಜ್, ಬೆಂಗಳೂರು |

ಮೇಲಿನ ಎಲ್ಲಾ ಪರೀಕ್ಷಕರು ಎಷ್ಟೇ ದೊಡ್ಡ ಅಧಿಕಾರಿಗಳಾದರೂ ಸ್ಪರ್ಧೆಗೆ ಪರೀಕ್ಷಕರಾಗಿ ಬಂದಿದ್ದರಿಂದ ಅವರನ್ನೂ ಹಾಗೂ ಬಹುಮಾನ ಪಡೆದ ವಿದ್ಯಾರ್ಥಿಗಳನ್ನೂ ಸಂಪಾಕದರು ಅಭಿನಂದಿಸುತ್ತಾರೆ. ಪ್ರಬುದ್ಧ ಕರ್ಣಾಟಕದ ಪೋಷಕರಾದ ಕೃಷ್ಣಸ್ವಾಮಯ್ಯಂಗಾರರ ಮರಣಕ್ಕಾಗಿ ಶೋಕಿಸುತ್ತಾರೆ. ಕೇವಲ ಬದುಕಿರುವವರನ್ನು ಮಾತ್ರವಲ್ಲದೇ ನಿಧನರಾದವರನ್ನು ಅವರ ಉಪಕಾರಕ್ಕಾಗಿ ಸ್ಮರಿಸುವ ಮಾನವೀಯತೆಯನ್ನು ಇಲ್ಲಿ ಕಾಣಬಹುದಾಗಿದೆ.

ವಸ್ತುಕೋಶದ ೨ನೇ ಭಾಗದಲ್ಲಿ 'ಶ್ರೀ'ಯವರ ಗದಾಯುದ್ಧ ನಾಟಕವು ಪಡೆದ ಜನಪ್ರಿಯತೆಗೆ ಹಾಗೂ ಇಂಗ್ಲಿಷ್ ಗೀತಗಳ ಪ್ರಸಿದ್ಧಿಯನ್ನು ಕುರಿತು ಪ್ರಶಂಸಿಸಲಾಗಿದೆ. ಅವೆರಡೂ ಕೀರ್ತಿಶಿಖರದಲ್ಲಿರುವಾಗಲೇ 'ಶ್ರೀ'ಯವರು ಅಶ್ವತ್ಥಾಮನ್ ಎಂಬ ಇನ್ನೊಂದು ನಾಟಕ ಕೃತಿಯನ್ನು ಕನ್ನಡ ಸಾಹಿತ್ಯಕ್ಕೆ ನೀಡಿದರು. ಅದು ಗದಾಯುದ್ಧದ ದ್ವಿತೀಯ ಭಾಗದಂತಿದೆ ಎನ್ನುತ್ತಾರೆ. ಈ ಎರಡರ ಭಾಷೆಯೂ ಹಳಗನ್ನಡ. ಆದರೆ ಕಥೆಯ ಪ್ರಾಚೀನತೆಗೂ, ಗಾಂಭೀರ್ಯಕ್ಕೂ, ರಸಕ್ಕೂ ಬಿಗಿಯಾದ ಹಳಗನ್ನಡವು ಹೊಂದಿಕೊಂಡು ಪ್ರೇಕ್ಷಕರನ್ನು ಮಹಾಭಾರತದ ಕಾಲದ ಬನವಾಸಿಗೆ ಕರೆದುಕೊಂಡು ಹೋಗಿ ನಿಲ್ಲಿಸಿದಂತಾಗುತ್ತದೆಂದು ಸಂಪಾದಕರು ವಿಮರ್ಶಿಸಿದ್ದಾರೆ. ಸಂಪ್ರದಾಯವಾದಿಗಳಿಗೆ ಇಲ್ಲಿ ಬರುವ ಸಿಡಿಲಿನ ಪೆಟ್ಟೆಂದರೆ ಚಿರಂಜೀವಿಯಾದ ಅಶ್ವತ್ಥಾಮನ ಆತ್ಮಹತ್ಯೆ. ಇಹಲೋಕದಲ್ಲಿ ಹುಟ್ಟುಸಾವುಗಳೇ ಕೊನೆ ಮೊದಲಲ್ಲ ಎಂದು ಸಂಪಾದಕರು ಅಭಿಪ್ರಾಯಪಡುತ್ತಾರೆ.

ಮುಂದಿನ ವರ್ಷದ ಪ್ರಬುದ್ಧ ಕರ್ಣಾಟಕದಲ್ಲಿ ಈ ನಾಟಕವನ್ನು ಪ್ರಕಟಿಸಲು ಅಪ್ಪಣೆ ನೀಡಿರುವುದಕ್ಕಾಗಿ ಪ್ರಬುದ್ಧ ಕರ್ಣಾಟಕವು ಶ್ರೀಕಂಠಯ್ಯನವರಿಗೆ ಕೃತಜ್ಞತೆಯನ್ನು ಸಲ್ಲಿಸುತ್ತದೆ. ನಂತರ 'ಅಶ್ವತ್ಥಾಮನೆಂಬ ರುದ್ರನಾಟಕ' ಎಂಬ ಭಾಗದಲ್ಲಿ ಗ್ರೀಕ್ ಮಹಾಕವಿ ಸಾಪೋಕ್ಲೀಸಿನ (ಕ್ರಿ.ಪೂ. ೪೯೩–೪೦೬) 'ಏಜಾಕ್ಸ್' ಎಂಬ

ರುದ್ರನಾಟಕವನ್ನು (Tragedy Play) ಆಶ್ರಯಿಸಿ, ಮಹಾಭಾರತದ 'ಸೌಪ್ತಿಕಪರ್ವ'ದ ಕಥೆಯನ್ನು ಅದರೊಡನೆ ಹೊಂದಿಸಿಕೊಂಡು ಈ ನಾಟಕವನ್ನು ರಚಿಸಲಾಗಿದೆ. ಎಂದು ಪಾತ್ರದ ಸಣ್ಣಪುಟ್ಟ ಬದಲಾವಣೆಗಳನ್ನು ತಿಳಿಸಿ, ನಂತರ ನಾಟಕದ ಸಾರಾಂಶವನ್ನು ಗದ್ಯರೂಪದಲ್ಲಿ ೧೦ ಸಣ್ಣ ಸಣ್ಣ ಭಾಗಗಳಲ್ಲಿ ಪ್ರಕಟಿಸಿದ್ದಾರೆ. ಈ ಸಾರಾಂಶವು ನಾಟಕದ ಬಗೆಗಿನ ಓದುಗರ ಆಸಕ್ತಿಯನ್ನು ಕೆರಳಿಸುವಲ್ಲಿ ಸಹಕಾರಿಯಾಗಿದೆ. ಇಂತಹ ಹೊಸ ವಾಗ್ವಾದಗಳಿಗೆ ಸಂ.ಕಾ.ಕ.ಸಂ. ದ ಪ್ರಕ.ವು. ಉತ್ತೇಜನ ನೀಡುತ್ತಿದ್ದುದನ್ನು ಈ ವಸ್ತುಕೋಶವು ನಿರೂಪಿಸಿದೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿಗೆ ನಮ್ಮ ಸಾಹಿತ್ಯ ಸಂಸ್ಕೃತಿಯನ್ನು ಹೊಂದಿಸುವುದಕ್ಕಾಗಿ ಈ ರೀತಿಯ ಪ್ರಯೋಗಗಳನ್ನು 'ಶ್ರೀ'ಯವರು ಮಾಡಿದರು. 'ಶ್ರೀ'ಯವರ ಈ ಕೊಡುಗೆ ಕನ್ನಡ ನಾಟಕ ಪರಂಪರೆಗೆ ಹೊಸ ಬುನಾದಿಯನ್ನು ಹಾಕಿಕೊಟ್ಟಿತು.

## ವಿದ್ಯಾರ್ಥಿ ಕವಿ ಸಮ್ಮೇಳನ ೧೯೨೮

ಸಂ.ಕಾ.ಕ.ಸಂ.ವು ಹಲವು ಬಗೆಯ ಸಾಹಿತ್ಯ ಕಾರ್ಯಕ್ರಮಗಳನ್ನು, ಸ್ಪರ್ಧೆಗಳನ್ನು, ಸಮ್ಮೇಳನಗಳನ್ನು ಆಯೋಜಿಸುತ್ತಿತ್ತೆಂಬುದನ್ನು ಈ ಮೊದಲೇ ಹೇಳಲಾಗಿದೆ. ಅವುಗಳಲ್ಲೆಲ್ಲಾ ಮಹಾಮೇರುವಿನಂತೆ ಕಂಗೋಳಿಸುವ, ಸಂಘದ ಸಾಧನೆಯ ಮೈಲಿಗಲ್ಲಾಗಿ ತೋರುವ, ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಬರೆದಿಡಬಹುದಾದ ಸಮ್ಮೇಳನವೆಂದರೆ, 'ವಿದ್ಯಾರ್ಥಿ ಕವಿ ಸಮ್ಮೇಳನ'.[೧] ೧೯೨೮ರ ಡಿಸೆಂಬರ್ ೧೫ರಂದು ವಿದ್ಯಾರ್ಥಿ ಕವಿ ಸಮ್ಮೇಳನವು 'ಸಂ.ಕಾ.ಕ.ಸಂ'ದಿಂದ ಆಯೋಜಿಸಲ್ಪಟ್ಟಿತ್ತು. ಆ ಸಂದರ್ಭದಲ್ಲಿ ಕುವೆಂಪುರವರ ಪ್ರತಿಭೆಯನ್ನು ಮೊದಲೇ ಗುರುತಿಸಿದ್ದ ಎ.ಆರ್. ಕೃಷ್ಣಶಾಸ್ತ್ರಿಯವರು ಅವರನ್ನು ವಿದ್ಯಾರ್ಥಿ ಕವಿ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿದರು. ಕರ್ನಾಟಕದ ಸಾಂಸ್ಕೃತಿಕ ಇತಿಹಾಸದಲ್ಲೇ ಇದೊಂದು ಚಿರಸ್ಮರಣೀಯ ಘಟನೆ. ವಿದ್ಯಾರ್ಥಿ ಕವಿ ಸಮ್ಮೇಳನದ ಸ್ವಾಗತ ಮಂಡಲಿಯ ಅಧ್ಯಕ್ಷರ ಭಾಷಣ ಹಾಗೂ ಕವಿ ಸಮ್ಮೇಳನದ ಅಧ್ಯಕ್ಷರ ಭಾಷಣಗಳಲ್ಲಿ ಅಂದಿನ ಮುಂದಿನ ಹಾಗೂ ಎಂದಿನ ಯುವ ಪ್ರತಿಭೆಗಳಿಗೆ ಸ್ಫೂರ್ತಿ ಹಾಗೂ ಮಾರ್ಗದರ್ಶಿಯಾಗಬಹುದಾದ ಹಲವು ಸಂಗತಿಗಳಿವೆಯೆಂದರೆ ತಪ್ಪಾಗಲಾರದು.

ಮೊದಲಿಗೆ ವಿದ್ಯಾರ್ಥಿ ಕವಿ ಸಮ್ಮೇಳನದ ಸ್ವಾಗತ ಮಂಡಲಿಯ ಅಧ್ಯಕ್ಷರಾದ ಜಿ. ಕೃಷ್ಣಯ್ಯಂಗಾರ್‌ರವರ ಭಾಷಣ. 'ಆರ್ಯ ಮಹಿಳೆಯರೇ ಮತ್ತು ಆರ್ಯ ಮಹನೀಯರೇ' ಎಂದು ತಮ್ಮ ಭಾಷಣ ಪ್ರಾರಂಭಿಸುವ ಇವರು ಮೊದಲಿಗೆ ಎಲ್ಲರಿಗೂ ಸ್ವಾಗತವನ್ನು ಬಯಸುತ್ತಾರೆ. ಕವಿ ಸಮ್ಮೇಳನವು ಹೊಸದು. ಅದರಲ್ಲೂ ವಿದ್ಯಾರ್ಥಿ ಕವಿ ಸಮ್ಮೇಳನವು ನವೀನವಾದದ್ದೆನ್ನುತ್ತಾರೆ. ವಿದ್ವಾಂಸರು ಹಣ್ಣುಗಳ ಹಾಗೆ; ವಿದ್ಯಾರ್ಥಿಗಳು ಹಸಿ ಕಾಯಿಯ ಹಾಗೆ. ಇವತ್ತು ಕಾಯಾಗಿರುವುದು ನಾಳೆ ಹಣ್ಣಾಗುತ್ತದೆ. ವಿದ್ಯಾರ್ಥಿಗಳ ನವಚೈತನ್ಯ, ಕರ್ಮಶೀಲತೆಯನ್ನು ಕಂಡು ಹಿರಿಯರು ಸಂತೋಷಪಡದಿರಲಾರರು. ಇದಕ್ಕೆ ಕಾರಣ ಸ್ವಾತಂತ್ರ್ಯ ಪ್ರೀತಿ. ರಾಜಕೀಯ, ಧಾರ್ಮಿಕ, ಸಾಮಾಜಿಕ, ಕಲೆ, ಸಾಹಿತ್ಯ ಈ ಪ್ರಪಂಚದ ಒಂದೊಂದರಲ್ಲಿಯೂ ಸ್ವಾತಂತ್ರ್ಯ ಪಡೆಯಬೇಕೆಂಬ ಉತ್ಸಾಹವು ಎಲ್ಲೆಲ್ಲೂ ಕಂಡುಬರುತ್ತಿದೆ. ಇದಕ್ಕೆ ಪಾಶ್ಚಾತ್ಯರ ಸಂಸರ್ಗವೇ ಕಾರಣ. ಪಾಶ್ಚಾತ್ಯರು ಸ್ವಾತಂತ್ರ್ಯಪ್ರಿಯರೂ, ಸ್ವತಂತ್ರರೂ ಆಗಿದ್ದರು. ಆದ್ದರಿಂದ ಅವರು ಕಟ್ಟಿದ ಬಂಧನವೂ ಸ್ವಾತಂತ್ರ್ಯ ಬೀಜವನ್ನು ಅಡಗಿಸಿಕೊಂಡೇ ಬಂದಿತೆಂದು ಹೇಳುತ್ತಾರೆ. ಇಂಗ್ಲಿಷ್ ಸಾಹಿತ್ಯವು ನಮ್ಮ

---

೬ ಪ್ರಕ. ೧೯೨೮ – ವಿಭವ ಸಂವತ್ಸರ – ೩೭ನೇ (ಸಂಕ್ರಾಂತಿ) ಸಂಪುಟ ೧೦ – ಸಂಚಿಕೆ ೩

ಸಾಹಿತ್ಯ ಭವನದ ನಿಜ ಸ್ವರೂಪವನ್ನು ತೋರಿಸಿ ಅದಕ್ಕೆ ಸತ್ಯ, ಸೌಂದರ್ಯ, ಸ್ವಾತಂತ್ರ್ಯ ಎಂಬ ಕಲಶಗಳನ್ನು ಹಾಕುವಂತೆ ಪ್ರೇರೇಪಿಸಿತು.

ಕನ್ನಡ ಸಾಹಿತ್ಯವು ಸಂಸ್ಕೃತದ ಆಸರೆಯಲ್ಲಿ ಬೆಳೆದು ಬಂತು. ಸಂಸ್ಕೃತದ ರಾಜಾಶ್ರಯವೇ ಸೆರೆಮನೆಯಂತಾಯಿತು. ಆದರೆ ಆಧುನಿಕ ಕನ್ನಡ ಸಾಹಿತ್ಯವು ಇಂಗ್ಲಿಷ್ ಸಾಹಿತ್ಯದಿಂದ ಹಲವು ರೂಪಗಳಲ್ಲಿ ಪ್ರೇರಿತವಾಯಿತು. ಪದ್ಯದ ರೂಪುರಚನೆ, ವಿಷಯ, ಸಾಮಗ್ರಿ, ಶಬ್ದ, ಶೈಲಿ ಮುಂತಾದುವುಗಳೆಲ್ಲ ಮಾರ್ಪಡುವುದಕ್ಕೆ ಮೊದಲಾದವು. ಈ ಕೆಲಸವನ್ನು ಮಹನೀಯರುಗಳಾದ ಹಳಕಟ್ಟಿ ನಾರಾಯಣರಾಯರು, ಗೋವಿಂದ ಪೈಯವರು, ಪಂಜೆ ಮಂಗೇಶರಾಯರು, ಬಿ.ಎಂ. ಶ್ರೀಕಂಠಯ್ಯನವರು, ಡಿ.ವಿ. ಗುಂಡಪ್ಪನವರು, ಶ್ರೀನಿವಾಸರು, ಸೀತಾರಾಮಯ್ಯನವರು ಮುಂತಾದ ವಿದ್ವಾಂಸರು ಸಾಹಿತ್ಯ ಪರಿಷತ್ತಿನ ಪತ್ರಿಕೆ, ಪ್ರಬುದ್ಧ ಕರ್ಣಾಟಕ ಮುಂತಾದ ಪತ್ರಿಕೆಗಳ ಮೂಲಕ ಹಾಗೂ ಸ್ವತಂತ್ರ ಗ್ರಂಥಗಳಲ್ಲಿ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯನ್ನು ಕಟ್ಟುವ ಕೆಲಸವನ್ನು ಮಾಡಿದ್ದಾರೆ. ಹಾಗಾಗಿ ಕನ್ನಡ ಕವಿತೆಗಳಲ್ಲಿ ಹೊಸ ಬಗೆಯ ಶೈಲಿಗಳು, ವಿಷಯಗಳು, ವೃತ್ತಗಳು ಸ್ಪಷ್ಟಗೊಂಡವು. ಲಘು ಕಾವ್ಯಗಳಲ್ಲಿಯೂ ಸುಂದರ, ಸುರಸವಾದ ಹೂ ಹಣ್ಣುಗಳು ಕಾಣುತ್ತಿವೆಯೆಂದು ಅನೇಕ ವಿದ್ವಾಂಸರು ಅಭಿಪ್ರಾಯಪಡುತ್ತಾರೆಂದು ಕೃಷ್ಣಯ್ಯಂಗಾರರು ಹೇಳುತ್ತಾರೆ. ಅದಕ್ಕೆ ಮೈಸೂರಿನ ಮಹಾರಾಜ ಕಾಲೇಜಿನ ಕರ್ಣಾಟಕ ಸಂಘದವರು ಪ್ರಕಟಿಸಿರುವ 'ಕಿರಿಯ ಕಾಣಿಕೆ'ಯು ಉದಾಹರಣೆಯಾಗಿದೆ. ಮೆಚ್ಚಿಗೆಗೆ ಹೇಗೆ ಪಾತ್ರವಾಗಿವೆ ಎಂಬುದಕ್ಕೆ ಈ ಕೆಳಗಿನ ಅಂಶಗಳು ನಿದರ್ಶನವಾಗಿವೆ :

೧. ರಾವ್ ಬಹಾದ್ದೂರ್ ಎಚ್. ಕೃಷ್ಣಶಾಸ್ತ್ರಿಗಳು ಕರ್ಣಾಟಕದ ಸಂಘದಲ್ಲಿ ಪದ್ಯಕಾವ್ಯ ರಚನೆಗಾಗಿ ಇಟ್ಟಿದ್ದ ಬಹುಮಾನ.

೨. ಬಿ.ಎಂ. ಶ್ರೀಕಂಠಯ್ಯನವರು ಉತ್ತಮ ಆಧುನಿಕ ಕವಿತೆಗಾಗಿ ಇಟ್ಟಿರುವ 'ರಜತ ಮಹೋತ್ಸವ ಸ್ವರ್ಣ ಪದಕ'.

ಸೆಂ.ಕಾ.ಕ.ಸಂ.ದವರು ಏರ್ಪಡಿಸಿದ್ದ ಈ ವಿದ್ಯಾರ್ಥಿ ಕವಿ ಸಮ್ಮೇಳನದಿಂದ ಮುಖ್ಯವಾಗಿ ಎರಡು ಪ್ರಯೋಜನಗಳಾದವು :

೧. ಈ ಸಮ್ಮೇಳನ ವಿದ್ಯಾರ್ಥಿಗಳ ಸಹಾಯ ಸಾಹಸಗಳಿಂದಲೇ ನಡೆದಿರುವುದರಿಂದ ಅವರಲ್ಲಿ ಒಂದು ವಿಧವಾದ ಧೈರ್ಯ, ಆತ್ಮ ವಿಶ್ವಾಸದ ಸಂಪಾದನೆ.

೨. ಈಗ ವಿದ್ಯಾರ್ಥಿಗಳಾಗಿ ಮುಂದೆ ವಿದ್ವತ್ಕವಿಗಳಾಗುವವರ ಪರಸ್ಪರ ಪರಿಚಯ, ಸಹಕಾರ, ಅದರಿಂದ ಬರುವ ಸತ್ಫಲ.

ಹೀಗೆ ಹೇಳುವ ಸ್ವಾಗತ ಮಂಡಲಿಯ ಅಧ್ಯಕ್ಷರು ಮತ್ತೊಮ್ಮೆ ಎಲ್ಲರಿಗೂ ಸ್ವಾಗತವನ್ನು ಬಯಸುತ್ತಾ, ಮೈ.ವಿ.ವಿ.ದ. ವಿದ್ಯಾರ್ಥಿಕವಿಗಳಲ್ಲಿ ಗಣ್ಯರಾದ ಬಿ.ಎಂ.ಶ್ರೀ.ಯವರ 'ರಜತ ಮಹೋತ್ಸವ ಸ್ವರ್ಣ ಪದಕ' ಪಡೆದು ಸನ್ಮಾನಿತರಾದ ಕೆ.ವಿ. ಪುಟ್ಟಪ್ಪನವರು ಅಗ್ರಾಸನವನ್ನು ಅಲಂಕರಿಸಬೇಕೆಂದು ಪ್ರಾರ್ಥಿಸುತ್ತಾರೆ. ಇದು ಮುಂದೆ ಕುವೆಂಪುರವರ ಸೃಜನಶೀಲ ನಡಿಗೆಗೆ ಪ್ರೇರಣೆ ಹಾಗೂ ಪೋಷಕವಾಗಿತ್ತು ಎಂಬುದನ್ನು ಗುರುತಿಸಬಹುದಾಗಿದೆ.

ಇಲ್ಲಿ ಸೆಂ.ಕಾ.ರ.ಸಂ.ವು ದೇಶದ ಮುಂದಿನ ಉತ್ತರಾಧಿಕಾರಿಗಳಾದ ತರುಣ ಕವಿಗಳಿಗೆ, ವಿದ್ಯಾರ್ಥಿಗಳಿಗೆ ಸಾಹಿತ್ಯಾಸಕ್ತಿ ಮೂಡುವಂತಹ ಹಾಗೂ ಅವರನ್ನು ಮುಂದೆ ತರುವಂತಹ ಉದಾರೀಕರಣ ಸಂಸ್ಕೃತಿಯನ್ನು, ಪ್ರಬುದ್ಧ

ಕರ್ನಾಟಕದ ಮೂಲಕ ಅವರನ್ನು ಉತ್ತೇಜಿಸುತ್ತಿದ್ದ ರೀತಿಯನ್ನೂ ಕಾಣಬಹುದಾಗಿದೆ.

**ವಿದ್ಯಾರ್ಥಿ ಕವಿ ಸಮ್ಮೇಳನದ ಅಧ್ಯಕ್ಷರ ಭಾಷಣ : ತರುಣ ಕವಿಗಳಲ್ಲಿ ಒಂದು ಬಿನ್ನಹ.**

"ಆರ್ಯರೇ ಆರ್ಯ ಮಹಿಳೆಯರೇ, ಮಿತ್ರರೇ, ಕವಿ ಸೋದರರೇ, ಕನ್ನಡಿಗರೇ" ಎಂದು ತಮ್ಮ ಭಾಷಣ ಆರಂಭಿಸುವ ಸಮ್ಮೇಳನಾಧ್ಯಕ್ಷರಾದ ಕೆ.ವಿ. ಪುಟ್ಟಪ್ಪನವರು ತಮ್ಮ ಗುರುಗಳಾಗಿರುವ ಶ್ರೀಯುತ ಎ.ಆರ್. ಕೃಷ್ಣಶಾಸ್ತ್ರಿಗಳ ಮಾತು ಮೀರಲಾರದೇ, ಅವರ ಆಹ್ವಾನವನ್ನು ಆಜ್ಞೆಯೆಂದು ಭಾವಿಸಿ ವಿನಯ, ನಮ್ರತೆ ಹಾಗೂ ಧೈನ್ಯದಿಂದ ತರುಣ ಕವಿ ಸಮ್ಮೇಳನದ ಅಧ್ಯಕ್ಷನಾಗಲು ಒಪ್ಪಿಕೊಂಡರೆಂದು ಹೇಳುತ್ತಾರೆ. ಇದರಲ್ಲಿ ಗುರುಗಳಿಗೆ ಶಿಷ್ಯನ ಮೇಲಿರುವ ಪ್ರೀತಿ, ವಿಶ್ವಾಸ, ಅಭಿಮಾನ ಒಲವುಗಳು ಕಾರಣವೇ ಹೊರತು ಶಿಷ್ಯನ ಹೆಚ್ಚುಗೆಯೇನೂ ಇಲ್ಲವೆಂದು ನುಡಿಯುತ್ತಾರೆ.

"ಪವಿತ್ರಳೂ, ಸನಾತನಳೂ ಆದ ಕನ್ನಡ ನುಡಿವೆಣ್ಣಿನ, ಕರ್ನಾಟಕ ವಾಗ್ದೇವಿಯ ಚರಣಸೇವೆಗೆ ನಿಂತಿರುವ ತರುಣ ಕವಿಗಳ ದರ್ಶನ, ಸಂಗ ಲಭಿಸಿದ್ದು ತಾವೂ ಆ ದೇವಿಯ ಸೇವೆ ಮಾಡುವಂತಾದುದಕ್ಕೆ ಹಿಗ್ಗುತ್ತಾರೆ. ತಮಗೆ ಬಂದ ಆಹ್ವಾನ ಪತ್ರಿಕೆಯ ಧಾಟಿ, ಆ ಕಾಗದದಲ್ಲಿದ್ದ ಸಮ್ಮೇಳನದ ಧ್ಯೇಯ, ಉಪಯೋಗಗಳ ಬಗೆಗಿನ ಮಾಹಿತಿಯನ್ನು ಮೆಚ್ಚುತ್ತಾರೆ. ಈ ರೀತಿಯ ಸಮ್ಮೇಳನಗಳಿಂದ ನಾಡಿನ ಕವಿಗಳಲ್ಲಿ ಏಕೀಭಾವವೂ, ಪರಸ್ಪರ ಉತ್ತೇಜವೂ ಉಂಟಾಗುವುದೆಂದು ತಿಳಿಸುತ್ತಾರೆ. ಇದು ಹೊಸ ಕಳೆಯ, ಹೊಸ ಸಾಹಿತ್ಯದ, ಹೊಸ ಸಾಹಸದ ಪವಿತ್ರ ಮಂದಿರವನ್ನು ಕಟ್ಟಲೆತ್ನಿಸುತ್ತಿರುವ ಹೊಸ ಶಿಲ್ಪಿಗಳ, ಕಿರಿಯ ಕವಿಗಳ ಕೂಟ. ಈ ಸೇತುಬಂಧದ ದಿವ್ಯ ಸಾಹಸದಲ್ಲಿ ತಮ್ಮದು ಅಳಿಲು ಸೇವೆಯೆಂದು ಹೇಳುತ್ತಾರೆ. ಸುಂದರವಾಗಿರುವ ಕಾವ್ಯ ಮಂದಿರದ ಸೌಂದರ್ಯವನ್ನು ಮತ್ತೂ ಹೆಚ್ಚಿಸುವುದೆಂತು? ನಮ್ಮ ಮಂದಿರಕ್ಕೆ ಯಾವ ಮಾದರಿಯಿರಬೇಕು? ಅದರ ಕುಂದುಕೊರತೆಗಳನ್ನು ನಿವಾರಿಸುವ ಬಗೆ ಹೇಗೆ? ಮಾರ್ಗ ನಮ್ಮ ಗುರಿ ಏನು? ಮೊದಲಾದ ಅಂಶಗಳು ತಮ್ಮ ಭಾಷಣದ ಸಾರಾಂಶವೆಂದು" ಕೆ.ವಿ. ಪುಟ್ಟಪ್ಪನವರು ಹೇಳುತ್ತಾರೆ.

ಹಿರಿಯರಲ್ಲಿ ವಿಜ್ಞಾಪನೆ ಏನೆಂದರೆ 'ಹಳೆಯದೆಲ್ಲಾ ಹೊನ್ನು, ಹೊಸತೆಲ್ಲಾ ಮಣ್ಣು' ಎಂಬ ಸೂತ್ರದಿಂದ ಹೊಸ ಸಾಹಿತ್ಯವನ್ನು ಹಳಿಯಬಾರದೆಂದು ಕೇಳಿಕೊಳ್ಳುತ್ತಾರೆ. ಹೊಸ ಸಾಹಿತ್ಯವನ್ನು ತೃಪ್ತಿಯಾದರೆ ಹೊಗಳಿ; ಇಲ್ಲದಿದ್ದರೆ ಖಂಡಿಸಿ, ತಪ್ಪುಗಳನ್ನು ತೋರಿಸಿಕೊಡಿ. ಅದರಿಂದ ತರುಣ ಕವಿಗಳಿಗೂ ಶ್ರೇಯಸ್ಸು. ಹಿರಿಯರಿಗೆ ಕಿರಿಯರನ್ನು ತಿದ್ದಿದೆವೆಲ್ಲಾ ಎಂಬ ತೃಪ್ತಿಯುಂಟಾಗುತ್ತದೆಂದು ಹೇಳಿದ್ದಾರೆ. ಹಳೆಯ ಬೆಳಕು ಜ್ಯೋತಿರ್ಮಯವಾದುದು. ಪವಿತ್ರವಾದುದು ಹಾಗಂತ ಹೊಸ ಬೆಳಕಿನ ಕಣ್ಣನ್ನು ಮುಚ್ಚಬಾರದೆಂದು ಹೇಳುತ್ತಾರೆ. ಸಾಹಿತ್ಯದ ಹಳೆಯ ಹಾದಿಯನ್ನು ಬಿಟ್ಟು ಹೊಸ ಹಾದಿಯಲ್ಲಿ ನಡೆಯುವುದರಲ್ಲಿ ತಪ್ಪಿಲ್ಲ. ಕರ್ನಾಟಕ ಸಾಹಿತ್ಯ ಸಾಮ್ರಾಜ್ಯದಲ್ಲಿ ದಂಗೆಯ ಮೇಲೆ ದಂಗೆಗಳಾಗಿವೆ. ಈ ಸಾಹಿತ್ಯ ಚರಿತ್ರೆಯು ಈ ದಂಗೆಗಳ ಚರಿತ್ರೆಯೆಂದು ಕುವೆಂಪುರವರು ಅಭಿಪ್ರಾಯಪಡುತ್ತಾರೆ.

ಇನ್ನು ತರುಣ ಕವಿಗಳಲ್ಲಿ ಕೆ.ವಿ. ಪುಟ್ಟಪ್ಪನವರ ಬಿನ್ನಹವೇನೆಂದರೆ ಹಳೆಯ ಸಾಹಿತ್ಯವನ್ನು ಉಪೇಕ್ಷಿಸಬಾರದೆಂಬುದು. ಏಕೆಂದರೆ ಹಳೆಯದೆಂದರೆ ಹೊಸದರ ಬೆನ್ನುಮೂಳೆ ಬಿ.ಎಂ.ಶ್ರೀ.ಯವರು ಕಲ್ಬುರ್ಗಿಯ ಕರ್ನಾಟಕ ಸಾಹಿತ್ಯ ಪರಿಷತ್ತಿನಲ್ಲಿ ಮಾಡಿದ ಭಾಷಣವನ್ನು ಎಲ್ಲರಿಗೂ ಒಮ್ಮನಸ್ಸಿನಿಂದ ಅಧ್ಯಯನ ಮಾಡಿ, ಅದರಂತೇ ನಡೆಯಲು ಯತ್ನಿಸಬೇಕೆನ್ನುತ್ತಾರೆ. ಪ್ರಾಚೀನ ಸಾಹಿತ್ಯ ದೇವತೆಯ ಭಕ್ತರಾಗಿ, ಆಕೆಯ ಮಕ್ಕಳಾಗಿ, ಆಕೆಯ ಕೃಪೆಯನ್ನು ಆರ್ಜಿಸಿ, ಮಕ್ಕಳಂತೆ ಒಲುಮೆಯನ್ನು

ಪಡೆದು ಧನ್ಯರಾಗಿ, ದಿವ್ಯರಾಗಿ, ಸಿದ್ಧರಾಗಿ, ಹೊರ ಹೊರಡಬೇಕೆಂದೂ ತರುಣ ಕವಿಗಳನ್ನು ಉತ್ತೇಜಿಸುತ್ತಾರೆ. 'ಕವಿತೆಯು ಅತ್ಯುತ್ತಮವೂ, ಸುಖತಮವೂ, ಆದ ಮನಸ್ಸುಳ್ಳ ಸೌಂದರ್ಯ ಯೋಗಿಗಳು. ತಮ್ಮ ಜೀವಮಾನದಲ್ಲಿ ಬರುವ ಸುಖತಮವೂ, ಅತ್ಯುತ್ತಮವೂ ಆದ ಸಮಯದಲ್ಲಿ ಹಾಡುವ ಆತ್ಮಗೀತಾಂಜಲಿ' ಎಂಬ ಆಂಗ್ಲ ಕವಿ ಷೆಲ್ಲಿಯ ಮಾತನ್ನು ಉದ್ಧರಿಸುತ್ತಾರೆ. ಸೃಷ್ಟಿಯ ಸೌಂದರ್ಯ, ರಹಸ್ಯವನ್ನು ಕಂಡು ಅದರ ಹಿಂದಿರುವ ಪವಿತ್ರ ಮಹಾ ವ್ಯಕ್ತಿತ್ವದಲ್ಲಿ ಉಂಟಾಗುವ ಪ್ರೇಮ, ಭಕ್ತಿ ಮೊದಲಾದ ದಿವ್ಯಭಾವಗಳು ತುಂಬಿದಾಗ ನಿರಾಯಾಸವಾಗಿ ಚಿಮ್ಮಿ ಬರುವ ಸುಗ್ಗಿಯ ಕುಣಿತವೇ ನಿಜವಾದ ಕವಿತೆಯೆಂದು ಹೇಳುತ್ತಾರೆ. ಕವಿತೆಯಲ್ಲಿ ಏನೋ ದಿವ್ಯಾಂಶವಿದೆ' ಎಂಬ ಬೇಕನ್ ಮಹಾಶಯನ ಮಾತನ್ನು ಉದಾಹರಣೆಯಾಗಿ ನೀಡುತ್ತಾರೆ.

ಕವಿತೆಯ ರಸಿಕನ ಎದೆಯ ವೀಣೆಯಿಂದ ಮೂಡಿ ಬರುವ ವಿಶ್ವದ ಸತ್ಯ, ಶಿವ, ಸೌಂದರ್ಯಗಳ ಮಂಜುಳ ಗಾನವೆಂದು ಹೇಳುತ್ತಾರೆ. ಕವಿತೆಯು ಆನಂದದ ಆಗರ, ಶಾಂತಿಯ ನೆಲೆಮನೆಯೆಂದು ತಿಳಿಸುತ್ತಾರೆ.

ಛಂದೋಬದ್ಧ ಭಾಷೆಯೆಲ್ಲವೂ ಕವಿತೆಯಲ್ಲ. ಕವಿಗೂ, ಪದ್ಯರಚಕನಿಗೂ ತುಂಬಾ ಅಂತರವುಂಟು. ಪ್ರತಿಯೊಬ್ಬ ಕವಿಯೂ ಪದ್ಯರಚಕನೇ; ಆದರೆ ಪದ್ಯರಚಕರೆಲ್ಲಾ ಕವಿಗಳಲ್ಲ; ಪದ್ಯ ರಚನೆಯಲ್ಲಿ ಮಾಧುರ್ಯ, ಶಕ್ತಿ, ಋಜುಭಾವ, ವೈವಿಧ್ಯ ಮೊದಲಾದವುಗಳು ತುಂಬಿ ತುಳುಕುವುವು ಕವಿತೆಗಳು. ಉತ್ತಮ ಕವಿತೆಗೂ ಸಾಧಾರಣ ಕವಿತೆಗೂ ಭೇದವೇನೆಂದರೆ : ಒಂದನೆಯದರಲ್ಲಿ ಭಾವವೇ ಪ್ರಧಾನ! ಎರಡನೆಯದರಲ್ಲಿ ಸಿದ್ಧಾಂತ, ಕುಶಲತೆಗಳು ಪ್ರಧಾನ! ಕವಿಯ ಗಮ್ಯ ಸ್ಥಾನವು ಆನಂದ; ಪದ್ಯರಚಕನದು ಪ್ರಯೋಜನ; ಕವಿತೆಯು ನೃತ್ಯದಂತೆ; ಪದ್ಯರಚನೆಯು ಪ್ರಯಾಣದಂತೆ. ಆನಂದವೇ ನೃತ್ಯದ ಲಕ್ಷ್ಯ ಆದರೆ ಪ್ರಯಾಣಿಕನು ಪ್ರತಿಯೊಂದು ಹೆಜ್ಜೆಯನ್ನೂ ಲಾಭಕ್ಕಾಗಿಯೇ ಇಡುವನು.

ಕವಿಗಳೆಂದರೆ ಯಾರು? ಎಂದು ಕೇಳುವ ಕೆ.ವಿ. ಪುಟ್ಟಪ್ಪನವರು ಯಾವಾತನು ತನ್ನ ಪುಣ್ಯವಶದಿಂದ ಅಂತರಾತ್ಮನ ದಿವ್ಯವಾಣಿಯ ಮಂಜುಳಗಾನಕ್ಕೆ ನಿಮಿತ್ತ ಮಾತ್ರವಾದ ಕೊಳಲಾಗುವನೋ ಆತನೇ ಕವಿಯೆಂದು ಹೇಳುತ್ತಾರೆ.

ಷೆಲ್ಲಿಯ ಮಾತನ್ನಿಲ್ಲಿ ಉದ್ಧರಿಸುತ್ತಾರೆ 'A poet as he is the author to others of the highest wisdom, pleasure, virtue and glory, so he ought personally to be the happiest, the best, the wisest and the most illustrious of men .... poets are the unacknowledged legislators of the world" ಎಂಬ ಷೆಲ್ಲಿಯ ಅಭಿಪ್ರಾಯವನ್ನು ತಿಳಿಸುತ್ತಾರೆ. ಕವಿಯು ಪ್ರತಿಭಾಶಾಲಿಯಾಗಿಯೂ, ಸ್ಫೂರ್ತಿಸಂಪನ್ನನಾಗಿಯೂ, ಸೌಂದರ್ಯ ಯೋಗಿಯಾಗಿಯೂ, ಲಾವಣ್ಯಾತ್ಮನಾಗಿಯೂ ಇರುವ ಋಷಿಯಾಗಿರಬೇಕು. ಆತನ ದೃಷ್ಟಿಗೆ ವೀಣಾ ಸದೃಶವಾದ ಸೂಕ್ಷ್ಮತೆಯಿರಬೇಕು.

ಕವಿಚಕ್ರವರ್ತಿ ರನ್ನ ಕವಿಯ ಬಗೆಗಿನ ಅವರ ಮತವೇನೆಂದರೆ :

"ಕವಿಮಾರ್ಗದೊಳೊಳಪೊಕ್ಕುಂ
ನವರಸಮಂ ತಿಜಿಯೆ ನುಡಿದನೆನಿಸಿದ ಕವಿ ಸ।
ತ್ಕವಿಯೆನಿಕುಂ ಗೂಡಾರದ
ಕವಿಯಂತಿರೆ ಮುಚ್ಚಿಪೋದ ಕವಿಯುಂ ಕವಿಯೇ" ಎಂಬುದನ್ನು ಕೆ.ವಿ.ಪು.ನವರು ಉದಾಹರಣೆಯಾಗಿ ನೀಡುತ್ತಾರೆ.

ಕವಿತೆಯು ಹೇಗಿರಬೇಕೆಂದು ಹೇಳುತ್ತಾ ಕೆಲವು ಸಂದರ್ಭಗಳಲ್ಲಿ ಅದು ಮೋಹನ ಭೀಷಣವಾಗಿಯೂ, ಕಾಳಿಯ ನೃತ್ಯದಂತೆ ಮಂಗಳಭಯಂಕರವಾಗಿಯೂ ಇರಬೇಕೆಂದು ಹೇಳುತ್ತಾರೆ. ದೇಶದ ದಾಸ್ಯವನ್ನು ಪರಿಹರಿಸಿ ಸ್ವಾತಂತ್ರ್ಯ ಸಾಮ್ರಾಜ್ಯ ಸ್ಥಾಪನೆ ಮಾಡುವ ಕಾರ್ಯಭಾರದಲ್ಲಿ ಕವಿಗಳು ತಟಸ್ಥರಾಗಿರುವುದು ಉಚಿತವಲ್ಲ. ಹಾಗೆ ಮಾಡಿದರೆ ಅದು ಹಾಸ್ಯಾಸ್ಪದವಾಗುತ್ತದೆಂದು ಹೇಳುತ್ತಾರೆ.

ಅಂದರೆ ಕವಿಗಳ ಕಾರ್ಯದ ಮಹತ್ತು ಕಡೆಯದೂ ಅಲ್ಲ; ಕೀಳಾದುದು ಅಲ್ಲ. 'Poets are the unacknowledgeal legislators of the world' ಎಂಬ ಷೆಲ್ಲಿಯ ಮಾತಿನಲ್ಲಿ ಬಹಳ ಅರ್ಥವಿದೆ. ಕವಿಗಳು ತಮ್ಮ ಗಾನದ ಇಂದ್ರಜಾಲದಿಂದ ಜನರ ಮನಸ್ಸನ್ನು ಎತ್ತಕಡೆಗೆ ಬೇಕಾದರೂ ತಿರುಗಿಸಬಹುದು. ಆದ್ದರಿಂದ ಕವಿಗಳ ಮೇಲಿರುವ ಭಾರವು ಅಷ್ಟೇನೂ ಕಿರಿದಲ್ಲ. ಬಹಳ ಪವಿತ್ರತಮವಾದುದು. ಅಂತಹ ಪಾವನವಾದ ಭಾರವನ್ನು ವಹಿಸಲು ನಾವೆಲ್ಲಾ ಅರ್ಹರಾಗಬೇಕೆಂದು ಎಲ್ಲ ತರುಣ ಕವಿಗಳನ್ನು ಕುವೆಂಪು ಪ್ರಾರ್ಥಿಸುತ್ತಾರೆ. ಹಿರಿಯ ಕವಿಗಳ ಉತ್ತಮ ಕೃತಿಗಳನ್ನು ಪೂಜ್ಯಬುದ್ಧಿಯಿಂದ, ವಿಮರ್ಶಕ ದೃಷ್ಟಿಯಿಂದ ಚೆನ್ನಾಗಿ ಓದಿ, ಅವರ ಮಾರ್ಗದ ಗುಣಾವಗುಣಗಳನ್ನು ತಿಳಿದು, ಅತಿಶಯೋಕ್ತಿಗೆ ಮಣಿಯದೇ ಯೋಗದೃಷ್ಟಿಯಿಂದ ಮುಂದುವರಿಯಲು ಸಲಹೆ ನೀಡುತ್ತಾರೆ. ಕೊನೆಯಲ್ಲಿ ತಾವು ಅಲ್ಪಾನುಭವದಿಂದ ಆಡಿದ ಮಾತುಗಳಲ್ಲಿ ಏನಾದರೂ ಅತ್ಯುಕ್ತಿಗಳಿಗೆದ್ದರೆ ಮನ್ನಿಸಬೇಕೆಂದು ಪ್ರಾರ್ಥಿಸುತ್ತಾರೆ. ಮೇಲೆರಿದಂತೆಲ್ಲಾ ತಮ್ಮ ನಮ್ರತೆಯು ಹೆಚ್ಚಾಗುವ ಹಾಗೆ ಅವರಿಂದ ಹರಕೆಯನ್ನು ಕೈಕೊಂಡು, ತಮ್ಮ ಗುರುವರ್ಯರ ಆಶೀರ್ವಾದವನ್ನು ಬೇಡಿ ತಮ್ಮ ಭಾಷಣವನ್ನು ಮುಗಿಸುತ್ತಾರೆ.

ತಮ್ಮ ಇಡೀ ಭಾಷಣದಲ್ಲಿ ಕುವೆಂಪು ಅವರು ಸಾಹಿತ್ಯಕ್ಕೆ ಆಧ್ಯಾತ್ಮಿಕ, ರಾಜಕೀಯ , ಸಾಮಾಜಿಕ ಆಯಾಮಗಳು ದಕ್ಕುವುದು ಹೇಗೆಂದು ತಿಳಿಸಿದ್ದಾರೆ. ಈ ನಿಟ್ಟಿನಲ್ಲಿ ನೋಡಿದಾಗ 'ಕಲೆಗಾಗಿ ಕಲೆ' ಎನ್ನುವ ತಾತ್ವಿಕ ವಿಚಾರದ ಬಗ್ಗೆ ಕುವೆಂಪು ಇಲ್ಲಿ ಪ್ರಶ್ನಿಸಿರುವುದು ಕಂಡುಬರುತ್ತದೆ. ಹಾಗೆ ಹೇಳಿ ಕಲೆ ಎನ್ನುವುದು ಸಾಮಾಜಿಕ ಆಯಾಮವನ್ನು ಪಡೆದುಕೊಳ್ಳುವ ಪ್ರಕ್ರಿಯೆಯನ್ನು ಸರಳವಾಗಿ ಬಿಡಬಹುದಾದ ಅಪಾಯಗಳನ್ನು ಸೂಚಿಸುತ್ತಾರೆ. ಹೀಗೆ, ಎಲ್ಲರಿಗೂ ಅನ್ವಯವಾಗಬಹುದಾದ ಹಾಗೂ ತಲಾತಲಾಂತರಕ್ಕೂ ನಿಲ್ಲಬಹುದಾದ ಸಾಹಿತ್ಯವನ್ನು ಕಟ್ಟಿಕೊಡುವುದರತ್ತ ಕುವೆಂಪು ಆಸಕ್ತರಾಗಿದ್ದರು. ಸಾಹಿತ್ಯದ ಈ ಗುಣಗಳನ್ನು ಅಂದರೆ ಸಾಮಾಜಿಕ, ಸಾಂಸ್ಕೃತಿಕ ಮತ್ತು ದೀರ್ಘವಾದ ತಾಳಿಕೆಯ ಗುಣವನ್ನು ಪಡೆದುಕೊಳ್ಳಬೇಕೆಂದರೆ ಅದಕ್ಕೆ ಬಹಳ ಮುಖ್ಯವಾಗಿ, ಆಪ್ತವಾಗಬೇಕಾದ ಆಧ್ಯಾತ್ಮಿಕತೆಯ ಆಯಾಮವನ್ನು ಕುರಿತು ಒತ್ತಿಹೇಳುತ್ತಾರೆ. ಇದು ಹೆಚ್ಚು ಕಡಿಮೆ Longinusನ ಕಾವ್ಯತತ್ವವನ್ನು ಹೋಲುವಂಥದ್ದು. ಇದೇ ರೀತಿಯ ಚಿಂತನೆಗಳನ್ನು ಕುವೆಂಪುರವರ ಕಾವ್ಯ ಮೀಮಾಂಸೆಯಲ್ಲಿ ಗುರುತಿಸಬಹುದು. 'ರಸೋವೈಸಃ' ಎನ್ನುವ ಲೇಖನ ಇದಕ್ಕೆ ಅತ್ಯುತ್ತಮ ಉದಾಹರಣೆಯಾಗುತ್ತದೆ. ನವೋದಯ ಕಾಲಘಟ್ಟದಲ್ಲಿ ಸಾಹಿತ್ಯಕ್ಕೆ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆಧ್ಯಾತ್ಮಿಕ ಅಯಾಮಗಳಿರಬೇಕೆಂದು ಹೇಳುವ ಬೇಂದ್ರೆ ಕೂಡ ಅವರಂತೆಯೇ ಷೆಲ್ಲಿಯನ್ನು ಉದ್ಧರಿಸುತ್ತಾರೆ.

'ಶೆಲೆ*ಯೊಳಗೆ ಸೆಲೆಯಾಗಿ ಹರಿದ ನೀರೇ
ಬಾರೇ ಕಂಡ ಕಣಿಯನ್ನು ಸಾರೇ
ಕೃತಯುಗದ ಸಾಮ್ರಾಜ್ಯ ನೆಲೆಸಿ ತೋರೇ
ಕಣ್ಣ ಕಟ್ಟಿರುವ ಧ್ರುವನ ತಾರೇ'[೨]

---

೨. ಅಂಬಿಕಾತನಯದತ್ತ ಅಹಹ ಸ್ವಾತಂತ್ರ್ಯ ದೇವಿ! ಗರಿ – ಸಂಪಾದಕರು – ವಾಮನಬೇಂದ್ರೆ – ಶ್ರೀಮಾತಾ ಪ್ರಕಾಶನ – ೨೦೦೬ ಪು.ಸಂ. ೪

* ಶೆಲೆ – Shelly ಆಂಗ್ಲಕವಿ

ಹೀಗೆ ಸಾಹಿತ್ಯ ಎನ್ನುವುದು ದರ್ಶನವಾಗುವುದರತ್ತ ಸಾಗುತ್ತಲೇ ಅದು ಸಮಾಜಮುಖಿಯೂ ಆಗುವ ಒಂದು ಮಹತ್ವಪೂರ್ಣವಾದ ಸ್ಥಿತಿಯನ್ನು ಕುವೆಂಪು ತರುಣ ಕವಿಗಳ ಮುಂದಿಡುತ್ತಾರೆ. ಪ್ರಬುದ್ಧ ಕರ್ಣಾಟಕದ ಚಿಂತನೆಯೂ ಇದೇ ಆಗಿದ್ದರಿಂದ ಕುವೆಂಪು ಅವರಲ್ಲಿದ್ದ ಪ್ರತಿಭೆಯನ್ನು ಗುರುತಿಸಿ, ಅವರನ್ನು ಪ್ರೋತ್ಸಾಹಿಸಿ ಅವರ ಚಿಂತನೆಗಳು ತರುಣ ಕವಿಗಳಿಗೆ ಮಾತ್ರವೇ ಅಲ್ಲದೇ ಎಲ್ಲ ಓದುಗ ವಲಯಕ್ಕೆ ತಿಳಿಯುವಂತೆ ತಲುಪಿಸಿದ್ದು ಪ್ರಬುದ್ಧ ಕರ್ಣಾಟಕದ ಒಂದು ಮಹತ್ವದ ಸಾಧನೆಯಾಗಿದೆ. ಮುಂದೆ ಕುವೆಂಪುವಾದ ಕೆ.ವಿ. ಪುಟ್ಟಪ್ಪನವರು ಇಡೀ ಕನ್ನಡ ಸಂಸ್ಕೃತಿಯ ಪ್ರತಿಮೆಯಂತಾದರು. ಪ್ರತಿಬಿಂಬವಾದರು. ಕನ್ನಡಿಗರ ಮನೆ ಮನಗಳಲ್ಲಿ ಎಂದೂ ಅಚ್ಚಳಿಯದಂತಹ ಛಾಪನ್ನು ಮೂಡಿಸುವುದಕ್ಕೆ ಈ ಪತ್ರಿಕೆ ಸಾಕ್ಷಿಯಾಗಿದೆ.

ಒಟ್ಟಿನಲ್ಲಿ ಹೊಸಗನ್ನಡ ಸಾಹಿತ್ಯದ ವಿಕಾಸಕ್ಕೆ ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘ ಹಾಗೂ ಪ್ರಬುದ್ಧ ಕರ್ಣಾಟಕದ ಕೊಡುಗೆ ಏನೆಂಬುದನ್ನು ಈ ಅಧ್ಯಾಯವು ಗುರುತಿಸಲು ಯತ್ನಿಸಿದೆ. ಅವುಗಳನ್ನು ಹೀಗೆ ಸಂಕ್ಷಿಪ್ತವಾಗಿ ಪಟ್ಟಿಮಾಡಬಹುದಾಗಿದೆ :

೧. ಬಿ.ಎಂ. ಶ್ರೀಕಂಠಯ್ಯನವರು ಪಾಶ್ಚಾತ್ಯ ಸಾಹಿತ್ಯದಲ್ಲಿದ್ದ ಟ್ರ್ಯಾಜಿಡಿಗಳನ್ನು ಶ್ರೇಷ್ಠವೆಂದು ಒಪ್ಪಿ ಅವುಗಳು ಏಕೆ ಭಾರತದಲ್ಲಿಲ್ಲ ಎಂದು ಪ್ರಶ್ನಿಸುತ್ತಲೇ ಭಾರತದ ರಂಗಭೂಮಿಯಲ್ಲಿ ಟ್ರ್ಯಾಜಿಡಿಯ ವಸ್ತು ನಾಟಕದ ಆಕೃತಿಯಲ್ಲಿ ಅಡಕವಾಗಿತ್ತೆಂದು ಸಮರ್ಥಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾರೆ. ಆದರೆ ಪ್ರಬುದ್ಧ ಕರ್ಣಾಟಕದಲ್ಲಿ ಸಂಸ್ಕೃತದ ನಾಟಕ, ಅಂತಃಸ್ಸತ್ವ ಮತ್ತು ದರ್ಶನಗಳ ಬಗ್ಗೆ ರೂಪುಗೊಳ್ಳುತ್ತಿದ್ದ ಈ ಮುಖ್ಯವಾದ ಸಂಕಥನವು ದೇಶೀಯ ಚಿಂತನೆಯ ಅನನ್ಯತೆಯನ್ನು ಸ್ಥಾಪಿಸಲು ಯತ್ನಿಸುತ್ತದೆ. ಆದ್ದರಿಂದ ವಸಾಹತು ಎಂಬುದು ಕೇವಲ ಸಾಂಸ್ಕೃತಿಕ ಕೀಳರಿಮೆಯನ್ನು ಹುಟ್ಟಿಸುವ ಅನುಭವವಾಗದೇ, ದೇಶೀಯ ತತ್ವದ ಬಗ್ಗೆ ಅಭಿಮಾನವನ್ನು ಉಂಟುಮಾಡುವ ಅನುಭವವಾಗಿ ವ್ಯಕ್ತವಾಗುತ್ತದೆ.

೨. ಇಡೀ ಪ್ರಬುದ್ಧ ಕರ್ಣಾಟಕದಲ್ಲಿರುವ ಎಲ್ಲಾ ವಿವರಗಳನ್ನೂ ಸಂಗ್ರಹ ರೂಪದಲ್ಲಿ ಕೊಡುವ ಉದ್ದೇಶದ ಹಿಂದೆ ಒಂದು ಮುಖ್ಯವಾದ ಸಾಂಸ್ಕೃತಿಕ ರಾಜಕಾರಣ ಕಾರ್ಯ ನಿರ್ವಹಿಸುತ್ತಿರುವುದನ್ನು ಗಮನಿಸಬಹುದು.ಹೊಸಯುಗ, ಹೊಸ ಪರಿಸರಕ್ಕೆ ಅಗತ್ಯವಾದ ಅತ್ಯಂತ ವೈವಿಧ್ಯಮಯವಾದ ಸಾಂಸ್ಕೃತಿಕ ಪರಿಸರವನ್ನು ಎಚ್ಚರಿಕೆಯಿಂದ ಕಟ್ಟುತ್ತಿರುವ ಪ್ರಯತ್ನ ಇಲ್ಲಿ ಕಂಡುಬರುತ್ತದೆ. ಈ ಕಟ್ಟುವಿಕೆಯ ಹಿಂದೆ ಪಾಶ್ಚಾತ್ಯ ಸಾಂಸ್ಕೃತಿಕ ಪರಿಸರಕ್ಕೆ ಸಮಾನವಾದ ಸಾಂಸ್ಕೃತಿಕ ಪರಿಸರವನ್ನು ಅಷ್ಟೇ ಗುಣಾತ್ಮಕವಾಗಿ ರೂಪಿಸುತ್ತಿರುವ ತಾದಾತ್ಮ್ಯತೆ ವ್ಯಕ್ತವಾಗುತ್ತದೆ.

೩. ಪ್ರಬುದ್ಧ ಕರ್ಣಾಟಕ ವಿದ್ಯಾರ್ಥಿಗಳನ್ನು ಕೇಂದ್ರೀಕರಿಸಿಕೊಳ್ಳುವುದರ ಮೂಲಕ ಹೊಸ ಕಾಲಘಟ್ಟಕ್ಕೆ ಅಗತ್ಯವಾದ ಹೊಸ ನಾಗರಿಕ ಸಮಾಜವನ್ನು ರೂಪಿಸುತ್ತಿತ್ತು.ಪ್ರತಿಯೊಂದು ಕಾಲದಲ್ಲೂ ಪ್ರತಿಯೊಂದು ಸಾಂಸ್ಕೃತಿಕ ರಾಜಕೀಯ ತತ್ವವು ತನಗೆ ಅಗತ್ಯವಾದಂತಹ ನಾಗರಿಕ ಸಮಾಜವನ್ನು ಕಟ್ಟುತ್ತಿರುತ್ತದೆ. ಪ್ರಬುದ್ಧ ಕರ್ಣಾಟಕ ಕಟ್ಟುತ್ತಿದ್ದ ಈ ನಾಗರಿಕ ಸಮಾಜದಲ್ಲಿ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಜಾಗೃತಿಗೊಂಡ ಹಾಗೂ ಹೊಸ ಮೌಲ್ಯಗಳನ್ನು ಮೈಗೂಡಿಸಿಕೊಂಡ ವ್ಯಕ್ತಿಗಳ ರೂಪಣೆ ಆಗುತ್ತಿತ್ತು.ಇದು ದೃಢವಾಗಿ ನಿಲ್ಲುವುದಕ್ಕೆ

ಅಗತ್ಯವಾದ ನೆಟ್‌ವರ್ಕ್ [ಬಂಧ]ವನ್ನೂ  ಕೂಡ ಪ್ರಬುದ್ಧ ಕರ್ಣಾಟಕವೇ ಕವಿ ಸಮ್ಮೇಳನಗಳ ಮೂಲಕ ಆಯೋಜಿಸುತ್ತಿತ್ತು.

೪. ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಒಂದು ಶ್ರೇಣೀಕರಣ ವ್ಯವಸ್ಥೆ ರೂಪುಗೊಳ್ಳುತ್ತಿರುವುದನ್ನು ಪ್ರಬುದ್ಧ ಕರ್ಣಾಟಕವು ಸೂಚಿಸುತ್ತದೆ. ಈ ಶ್ರೇಣೀಕರಣ ವ್ಯವಸ್ಥೆಯಲ್ಲಿ ಕವಿಗಳು ತುಟ್ಟತುದಿಯಲ್ಲಿರುವುದು ಕಂಡುಬರುತ್ತದೆ.

೫. ಬೆಂ.ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ಣಾಟಕ ಸೃಷ್ಟಿಸುತ್ತಿದ್ದ ಸಮಾಜೋ ರಾಜಕೀಯ ಸಂಕಥನದಲ್ಲಿ 'ಕಲೆಗಾಗಿ ಕಲೆ 'ಎನ್ನುವ ತತ್ವಕ್ಕೆ ಹೆಚ್ಚು ಪ್ರಾಧಾನ್ಯತೆ ನೀಡುವುದಿಲ್ಲ.ಬದಲಿಗೆ 'ಸಮಾಜಕ್ಕಾಗಿ ಕಲೆ' ಎನ್ನುವುದರತ್ತ ಪ್ರಬುದ್ಧ ಕರ್ಣಾಟಕದ ತತ್ವವು ತುಡಿಯುತ್ತದೆ.

## ೩. ಪ್ರಬುದ್ಧ ಕರ್ನಾಟಕ ಕಟ್ಟುತ್ತಿದ್ದ ರಾಷ್ಟ್ರೀಯತೆಯ ಲಕ್ಷಣಗಳು

ಸ್ವಾತಂತ್ರ್ಯ ಸಂಗ್ರಾಮದಲಿ ತನ್ನ ಜೀವನವನು
ಲೆಕ್ಕಿಸದೆ ಹೋರುವವನು ವೀರ ಸತ್ಯಾಗ್ರಹಿ
ನೊಂದರೂ ಬೆಂದರೂ ಸತ್ಯವನು ಕೈಬಿಡದೆ
ಜವನ ದಾಡೆಯ ನುಗ್ಗುವವನು ಸತ್ಯಾಗ್ರಹಿ!
ಆತ್ಮಶಕ್ತಿಯ ಬಲದಿ ಮಿಂಚುಗಳ ಸಂತೈಸಿ
ಸಿಡಿಲಗಳ ಬೋಳೈಸಾವವನು ಸತ್ಯಾಗ್ರಹಿ;
ಹೊಡೆಯದೆಯ ತಡೆಯುವವನು ವೀರ ಸತ್ಯಾಗ್ರಹಿ!
ಗೆಲ್ಲದೆಯ ಗೆಲ್ಲುವನು ವೀರ ಸತ್ಯಾಗ್ರಹಿ!
ಸಿಡಿಗುಂಡಿನೆದುರಿನಲಿ, ಕೂರಸಿಗಳೆದುರಿನಲಿ,
ಕಬ್ಬಿಣದ ಸಂಕೋಲೆಗಳ ಕರಿಯ ತೆಕ್ಕೆಯಲಿ,
ಜೈಲಿನಲಿ ಅಧಿಕಾರಿಗಳ ಕ್ರೂರ ದರ್ಪದಲಿ,
ಹರಿವೆದೆಯ ನೆತ್ತರಿನ ಹೊಳೆಯಲ್ಲಿ, ಮುಂದಿಟ್ಟ
ಹೆಜ್ಜೆ ಹಿಂದೆಗೆಯದಳಿವವನು ಸತ್ಯಾಗ್ರಹಿ!
ದೇಶಮಾತೆಯ ಸುಖಕೆ ತನ್ನ ಸುಖವನು ಬೇಳ್ವ ,
ದೇಶದ ಬದುಕಿಗಾಗಿ ತನ್ನ ಬದುಕನು ಸೀಳ್ವ,
ಹಿಂಸೆಯನಹಿಂಸೆಯಿಂ ಹಿಂಸಿಸದೆ ಕೊಲ್ವ,
ಸಮರಲೋಲನೆ ನಮ್ಮ ವೀರ ಸತ್ಯಾಗ್ರಹಿ ! *

– ಕುವೆಂಪು

---

* ಕುವೆಂಪು – ಸತ್ಯಾಗ್ರಹಿ – ಪಕ್ಷಿಕಾಶಿ – ಉದಯರವಿ ಪ್ರಕಾಶನ – ೧೯೯೯ – ಪು.ಸಂ. ೧೬

# ಪ್ರಬುದ್ಧ ಕರ್ನಾಟಕ ಕಟ್ಟುತ್ತಿದ್ದ ರಾಷ್ಟ್ರೀಯತೆಯ ಲಕ್ಷಣಗಳು

ಈ ಅಧ್ಯಾಯದ ಪ್ರಮುಖ ಉದ್ದೇಶ, ಪ್ರಬುದ್ಧ ಕರ್ನಾಟಕದಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆಯ ಬಗ್ಗೆ ಯಾವ ರೀತಿಯ ಚರ್ಚೆ ರೂಪುಗೊಳ್ಳುತ್ತಿತ್ತು ಎಂಬುದನ್ನು ಪರಿಶೀಲಿಸುವುದಾಗಿದೆ. ಪಾಶ್ಚಿಮಾತ್ಯ ಹಾಗೂ ಇಂಗ್ಲೀಷ್ ಶಿಕ್ಷಣದಿಂದ ಬಂದ ಚಿಂತನೆಗಳೇ 'ರಾಷ್ಟ್ರೀಯತೆ' ಪರಿಕಲ್ಪನೆಯ ಮೂಲವಾಗಿದೆ. ಸ್ವತಂತ್ರ ಪೂರ್ವದಲ್ಲಿ ಸುಮಾರು ಐನೂರಕ್ಕೂ ಹೆಚ್ಚಿನ ಸಂಸ್ಥಾನಗಳಾಗಿ ಹರಿದು ಹಂಚಿಹೋಗಿದ್ದ ಭಾರತ-ಭಾರತೀಯತೆ ಒಂದಾಗಲು, ಏಕತಾಭಾವ ಮೂಡಲು, ಸಹಾಯಕವಾಗಿದ್ದೇ ಪಾಶ್ಚಿಮಾತ್ಯ ಚಿಂತನೆಗಳು. ಈ ಚಿಂತನೆಗಳು ಭಾರತೀಯರೆಲ್ಲರಲ್ಲೂ, ನನ್ನ ದೇಶ, ನನ್ನ ಭಾಷೆ, ನನ್ನ ಜನ ಎಂಬ ಭಾವನೆ ಮೂಡಿಸಿದವು. ಅವುಗಳ ಏಳಿಗೆಗಾಗಿ ಎಲ್ಲರೂ ಕಂಕಣಕಟ್ಟಿ ನಿಲ್ಲಲಾರಂಭಿಸಿದರು. ರಾಷ್ಟ್ರೀಯತೆಯ ಪರಿಕಲ್ಪನೆಯು ವಸಾಹತುಶಾಹಿಗಳ ಸಂದರ್ಭದಲ್ಲಿ ರೂಪುಗೊಂಡಿರುವ ವಸಾಹತುಶಾಹಿಯ ದೇಶೀಯತೆಯ ಮೇಲಿನ ಆಕ್ರಮಣದಿಂದ ಜಾಗೃತವಾದ ರಾಷ್ಟ್ರೀಯತೆಯು ಭಾರತೀಯರಲ್ಲಿ ನಾವೆಲ್ಲಾ ಒಂದು ಎಂಬ ಭ್ರಾತೃತ್ವದ ಭಾವನೆಯನ್ನು ಮೂಡಿಸಿದವು.

"ರಾಷ್ಟ್ರೀಯತೆ ಎನ್ನುವುದು ಮುಖ್ಯವಾಗಿ ಬಂಡವಾಳಶಾಹಿ ಚಾರಿತ್ರಿಕ ಘಟ್ಟದ ಸೃಷ್ಟಿ. ಲೆನಿನ್ ಇದನ್ನು ಪೌರಾತ್ಯ ನಾಡುಗಳಲ್ಲಿ ರಾಷ್ಟ್ರೀಯತೆಯ ಪರಿಕಲ್ಪನೆ" ಎಂಬ ಬರಹದಲ್ಲಿ ವಿವಿರವಾಗಿ ಚರ್ಚಿಸುತ್ತಾನೆ. ಅದರಲ್ಲಿಯೂ ಫ್ಯೂಡಲ್ ಶಕ್ತಿಗಳ ಆ ಚಾರಿತ್ರಿಕ ಘಟ್ಟದ ವಿರುದ್ಧ ಸಂಪೂರ್ಣ ಜಯವನ್ನು ಬಂಡವಾಳಶಾಹಿ ಸಾಧಿಸುವುದು ಈ ಸೈದ್ಧಾಂತಿಕ ನೆಲೆಗಟ್ಟಿನಲ್ಲಿಯೇ. ಮಾರ್ಕ್ಸ್ ಕೂಡಾ ಈ ರಾಷ್ಟ್ರೀಯ ಪ್ರಶ್ನೆಯನ್ನು ತನ್ನ ಕೃತಿಗಳಲ್ಲಿ ಚರ್ಚಿಸಿದ್ದರೂ ಅದು ತನ್ನ ತಾತ್ವಿಕ, ರಾಜಕೀಯ ಪರಿಣತಿಯನ್ನು ಸಾಧಿಸಿದ್ದು ಲೆನಿನ್‌ನಲ್ಲಿಯೇ"[೧] ಎಂದು ಡಿ.ಆರ್. ನಾಗರಾಜ್ ತಿಳಿಸುತ್ತಾರೆ.

ರಾಷ್ಟ್ರೀಯತೆಯ ಪ್ರಮುಖ ಲಕ್ಷಣಗಳನ್ನು ಡಾ॥ ಡಿ. ಆರ್. ನಾಗರಾಜ್ ಈ ರೀತಿ ಹೇಳುತ್ತಾರೆ:

೧. ಸಮಾನ ಪ್ರಾದೇಶಿಕತೆ (ಕಾಮನ್ ಟೆರಿಟರಿ)

೨. ಸಮಾನ ಮಾರುಕಟ್ಟೆ

೩. ಸಮಾನ ಭಾಷೆ (ಹಲವು ಭಾಷೆಗಳಿದ್ದರೂ ಸರಿ ಎಂಬ ನಿಲುವು -ಉದಾ: ಭಾರತ, ರಷ್ಯಾ)

೪. ರಾಷ್ಟ್ರೀಯ ಪ್ರಭುತ್ವ (ನೇಷನ್ ಸ್ಟೇಟ್ ಎಂಬರ್ಥದಲ್ಲಿ)

೫. ಸಮಾನ ಮಾನಸಿಕ ಸ್ವರೂಪ (ಕೆಲವರು ಇದನ್ನೇ ಹಿಗ್ಗಿಸಿ ಸಂಸ್ಕೃತಿ ಎಂಬರ್ಥದಲ್ಲಿ ಬಳಸುವುದುಂಟು).[೨]

ಮೊದಲೇ ಹೇಳಿದಂತೆ ಭಾರತದ ರಾಷ್ಟ್ರೀಯತೆಯ ಉಗಮದ ಮಹಾ ಪ್ರೇರಣೆಯೇ ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕ ಎಂದು ಗಾಂಧಿ ಚಿಂತಿಸಿದರು. ೧೯ನೇ ಶತಮಾನದ ರಾಜರಾಮ್ ಮೋಹನರಾಯ್, ಜ್ಯೋತಿಭಾಪುಲೆ, ದಯಾನಂದ ಸರಸ್ವತಿ ಮೊದಲಾದವರು ರಾಷ್ಟ್ರೀಯತೆಯನ್ನು ವಿವಿಧ ಮಾದರಿಗಳಲ್ಲಿ ವಿವೇಚಿಸಿದ್ದಾರೆ. ೨೦ನೇ ಶತಮಾನದಲ್ಲಿ ಗಾಂಧೀಜಿ, ಅಂಬೇಡ್ಕರ್, ನೆಹರೂ, ಲೋಹಿಯಾ, ಸುಭಾಷ್‌ಚಂದ್ರ ಬೋಸ್, ಹೀಗೆ ಒಬ್ಬೊಬ್ಬರ

---

೧, ೨. ಡಾ॥ ಡಿ. ಆರ್. ನಾಗರಾಜ್, ಸಾಹಿತ್ಯ ಕಥನವ – ರಾಷ್ಟ್ರೀಯತೆಯ ಪರಿಕಲ್ಪನೆ – ಅಕ್ಷರ ಪ್ರಕಾಶನ ೨೦೦೬ ಪು.ಸಂ. ೨೪೮.

ರಾಷ್ಟ್ರೀಯತೆಯ ಕಲ್ಪನೆಯೂ ವಿಭಿನ್ನವಾಗಿದೆ. ಆದರೆ ಎಲ್ಲರ ರಾಷ್ಟ್ರೀಯತೆಯ ಕಲ್ಪನೆಗಿಂತ ವಿಭಿನ್ನವಾದದ್ದು ಗಾಂಧೀಜಿಯವರ ಪರಿಕಲ್ಪನೆ. ಗಾಂಧೀಜಿಯವರ ಪರಿಕಲ್ಪನೆಯನ್ನು ಕುರಿತು ಡಿ. ಆರ್. ನಾಗರಾಜ್ ಹೀಗೆ ಹೇಳಿದ್ದಾರೆ :

"ಗಾಂಧಿ ತನ್ನನ್ನು ಅರ್ಧನಾರೀಶ್ವರ ತತ್ವ – ಪ್ರತೀಕದ ಜತೆಗೆ ಗುರುತಿಸಿಕೊಂಡಿದ್ದು ಒಟ್ಟು ಜೀವನ ಕ್ರಮಕ್ಕೆ, ನಾಗರಿಕತೆಯ ನಿರ್ಮಿತಿಗೂ ಹಬ್ಬುವಷ್ಟು ಸಾಂಕೇತಿಕತೆ ಪಡೆದಿದೆ. ಇಲ್ಲಿ 'ಹೆಣ್ಣಿಗತನ' ಎನ್ನುವುದು ಅಪಮಾನಕಾರಿ ಸಂಗತಿಯಲ್ಲ ಬದಲಾಗಿ ಮಾನವೀಯತೆಯ ಸಾರರೂಪ ಅದು. ಹಾಗೆಯೇ, ಅಹಿಂಸೆ ಎನ್ನುವುದು ಇಲ್ಲಿ ಶ್ರೇಷ್ಠ ಮೌಲ್ಯ. ಈ ನಾಡನ್ನು ಮತೀಯ ಹಿಂಸೆಯಿಂದ ನಾಶವಾಗದಂತೆ ಕಾಪಾಡುವುದು ಈ ಮೌಲ್ಯಗಳೇ ಎಂಬುದು ತುಂಬ ಮುಖ್ಯ"[೩]

ರಾಷ್ಟ್ರೀಯತೆ – ಕನ್ನಡ, ನಾಡು–ನುಡಿ ಏಕೀಕರಣವನ್ನು ಕುರಿತು ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಕೃತಿಗಳು ರಚಿತವಾದವು. ಅಖಿಲ ಭಾರತೀಯ ಮಟ್ಟದಲ್ಲಿ ಹಾಗೂ ಪ್ರಾದೇಶಿಕಮಟ್ಟದಲ್ಲಿಯೂ ಜನರು ತಮ್ಮ ದೇಶ–ಭಾಷೆಯನ್ನು ಕುರಿತು ಜಾಗೃತರಾಗುತ್ತಿದ್ದರು. ಗಾಂಧೀಜಿಯವರ ಆದರ್ಶ ರಾಮರಾಜ್ಯದ ಕನಸು ಬ್ರಿಟಿಷರ ಸಾಮ್ರಾಜ್ಯಶಾಹಿ ವಸಾಹತುಶಾಹಿ ವಿರುದ್ಧ, ಅವರ ನವ ಸಾಂಸ್ಕೃತಿಕ ಶಕ್ತಿಯ ವಿರುದ್ಧ ಭಾರತೀಯರನ್ನು ಒಗ್ಗೂಡಿಸಿತು. ಭಾರತೀಯರೆಲ್ಲರೂ ತಮ್ಮ ಮೇಲು–ಕೀಳು, ಜಾತಿ–ಪಂಥದ ಭಾವನೆಗಳನ್ನು ತೊರೆದು ವಸಾಹತುಶಾಹಿಯನ್ನು ಹಿಮ್ಮೆಟ್ಟಿಸಲು ಯತ್ನಿಸಿದರು. ಗಾಂಧೀಜಿಯವರ ಆದರ್ಶವಾದ, ಸತ್ಯ–ಶಾಂತಿ–ಅಹಿಂಸೆಯ ಮಂತ್ರಗಳು, ಹಿರಿಯ ಸ್ವಾತಂತ್ರ ಹೋರಾಟಗಾರರ ಹಾಗೂ ಗಾಂಧೀಜಿಯವರ ಭಾಷಣಗಳು, ಲೇಖನಗಳು, ಈ ನಿಟ್ಟಿನಲ್ಲಿ ಜನರ ಮೇಲೆ ಗಾಢ ಪರಿಣಾಮ ಬೀರಿದವು.

"ಹೆಜ್ಜೆಹೆಜ್ಜೆಗೂ ತನ್ನ ಉಪಾಧಿಯ ವೃತ್ತರೇಖೆಯನ್ನು ವಿಸ್ತರಿಸಿಕೊಂಡು ವಿಶಾಲವಾಗುವ ಈ ವಿಕಾಸದಲ್ಲಿ, ಸೃಷ್ಟಿಯಿಂದ ವಿಶ್ವದವರೆಗಿನ ಈ ಮಜಲಿನಲ್ಲಿ ವ್ಯಕ್ತಿಯು ದೇಶಪ್ರೇಮವೆಂಬ ಒಂದು ಘಟ್ಟದಲ್ಲಿ ನಿಂತು ತನ್ನ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾನೆ. ಇಂತಹ ಮಜಲಿನಲ್ಲಿ ಹೆತ್ತತಾಯಿ ಪ್ರೀತಿಪಾತ್ರಳಾಗುವಂತೆ, ತಮ್ಮೆಲ್ಲರಿಗೂ ಜನ್ಮವಿತ್ತ ದೇಶ ಮಾತೃಭೂಮಿಯಾಗಿ ಮೈಗೊಂಡು ವ್ಯಕ್ತಿಯ ಪ್ರೇಮಕ್ಕೆ ಪಾತ್ರವಾಗುತ್ತದೆ. ಮಾತೃಭೂಮಿಯ ಬಗೆಗೆ ಆರಾಧನಾ ರೂಪವಾಗಿ ಪ್ರೀತಿಯನ್ನು ತೋರುವುದೂ, ಅದಕ್ಕಾಗಿ ತನ್ನ ತನುವನ್ನು ತ್ಯಾಗಮಾಡುವುದೂ ಕರ್ತವ್ಯವೆಂದು ವ್ಯಕ್ತಿ ಭಾವಿಸುತ್ತಾನೆ. ಇಂತಹ ದೇಶಪ್ರೇಮದ ಭಾವ ಕವಿಯ ಮೂಲಕ ಸಮಷ್ಟಿಯ ಹಾರೈಕೆಯಾಗಿ, ಹಾಡುಗಳಾಗಿ, ಮೂಡುತ್ತದೆ. ಜನತೆಯನ್ನು ಎಚ್ಚರಿಸಿ ಅವರನ್ನು ಕರ್ತವ್ಯಪರರನ್ನಾಗಿ ಮಾಡುವ ಶಕ್ತಿಯೂ ಆಗುತ್ತದೆ. ನವೋದಯ ಕವಿಗಳಲ್ಲಿ ನೂತನ ಚೈತನ್ಯವನ್ನು ತುಂಬಿದುದು ಭರತಮಾತೆಯ ಬಿಡುಗಡೆಯ ತುಡಿತವಾದ ರಾಷ್ಟ್ರೀಯತೆ, ಪರಕೀಯ ಪ್ರಭುತ್ವದಿಂದ ಪಾರಾಗಿ ಸ್ವರಾಜ್ಯವನ್ನು ಗಳಿಸಿಕೊಳ್ಳುವ ಹಂಬಲವೇ ರಾಷ್ಟ್ರೀಯತೆ"[೪] ಎಂಬುದು ಡಾ. ಜಿ.ಎಸ್.ಎಸ್. ಅವರ ಅಭಿಪ್ರಾಯವಾಗಿದೆ.

ಪ್ರಾಂತೀಯ ಹಾಗೂ ರಾಷ್ಟ್ರಮಟ್ಟದಲ್ಲಿ ಕವಿಗಳೂ, ಲೇಖಕರೂ, ರಾಷ್ಟ್ರೀಯತೆ, ಏಕೀಕರಣ, ಪ್ರಾದೇಶಿಕತೆ, ಸೋದರತೆ, ಹಾಗೂ ಭಾಷೆಯನ್ನು ಕುರಿತು ಮಾಡಿದ ಸಾಹಿತ್ಯ ಕೃಷಿಯು ರಾಷ್ಟ್ರೀಯ ಸಂಕಥನದ ಪ್ರಮುಖ ಅಂಶವಾಯಿತು.

---

೩. ಡಾ॥ ಡಿ. ಆರ್. ನಾಗರಾಜ್ – ಸಾಹಿತ್ಯಕಥನ – ರಾಷ್ಟ್ರೀಯತೆಯ ಪರಕಲ್ಪನೆ – ಅಕ್ಷರ ಪ್ರಕಾಶನ – ೨೦೦೯ – ಪು.ಸಂ. ೨೪೯

೪. ಡಾ॥ ಜಿ. ಎಸ್. ಶಿವರುದ್ರಪ್ಪ – ಸೌಂದರ್ಯ ಸಮೀಕ್ಷೆ – ಕಾಮಧೇನು ಪುಸ್ತಕ ಭವನ – ೨೦೧೧ – ಪು.ಸಂ. ೩೫೬.

"ನಾಡು–ನುಡಿ–ರಾಷ್ಟ್ರಗಳ ಅನನ್ಯತೆಗಳ ಬಗೆಗೆ ಜನತೆಯಲ್ಲಿ ಅಭಿಮಾನವನ್ನು ಮೂಡಿಸುವುದು ರಾಷ್ಟ್ರೀಯ ಪ್ರಜ್ಞೆಯ ಮುಖ್ಯ ಲಕ್ಷಣ. ರಾಷ್ಟ್ರದ ಅನನ್ಯತೆಗಳಿಗೆ ಮಾರಕವಾಗುವ ಹೊರಗಿನ ಶಕ್ತಿಗಳನ್ನು ವಿರೋಧಿಸುವಂತೆ ಜನತೆಯನ್ನು ಪ್ರೇರೇಪಿಸುವುದು ಸಾಂಸ್ಕೃತಿಕ ಸಂವೇದನೆಯ ಹೊಣೆ. ಇಂಥ ಬಾಧ್ಯತೆಗಳ ಪರಂಪರೆಯು ಬಂಕಿಮಚಂದ್ರ ಅವರ 'ವಂದೇ ಮಾತರಂ', ರವೀಂದ್ರನಾಥ ಠಾಕೂರರ 'ಜನಗಣಮನ' ಗೀತೆಗಳಿಂದಲೇ ಆರಂಭವಾಯಿತೆನ್ನಬಹುದು. ಈ ಬಗೆಯ ಕೃತಿಗಳ ಮುಖ್ಯ ಉದ್ದೇಶ ಮೊದಲೇ ಹೇಳಿದಂತೆ, ದೇಶದ ಅನನ್ಯತೆಗಳನ್ನು ಎತ್ತಿ ಹೇಳುತ್ತಾ ಜನತೆಯಲ್ಲಿ ಒಮ್ಮತವನ್ನು ಉಂಟುಮಾಡುವುದರೊಂದಿಗೆ, ಪರಕೀಯ ಆಕ್ರಮಣಗಳಿಗೆ ಎದುರಾಗುವಂತೆ ಮಾಡುವುದು"[೫] ಎಂದು ರಾಷ್ಟ್ರೀಯ ಪ್ರಜ್ಞೆಯನ್ನು ಕುರಿತು ಡಾ. ಕೆ.ಸಿ. ಶಿವಾರೆಡ್ಡಿಯವರು ಅಭಿಪ್ರಾಯಪಟ್ಟಿದ್ದಾರೆ.

'ದೇಶ ಕಟ್ಟುವುದು, ಭಾಷೆ ಕಟ್ಟುವುದು, ಸಂಸ್ಕೃತಿ ಕಟ್ಟುವುದು', ಎಂಬ ಆಕಾಂಕ್ಷೆಯನ್ನು ಕುವೆಂಪುರವರ 'ಭಾರತ ಜನನಿಯ ತನುಜಾತೆ ಜಯ ಹೇ ಕರ್ನಾಟಕ ಮಾತೆ' ಕವಿತೆಯು ಬಹಳ ಸೊಗಸಾಗಿ ಕಟ್ಟಿಕೊಡುತ್ತದೆ. ಇವರ ಹಾಗೆಯೇ ನವೋದಯ ಕವಿಗಳು ತಮ್ಮ ಕಾವ್ಯಚಿಂತನೆಗಳಲ್ಲಿ ನಾಡು–ನುಡಿ, ಏಕೀಕರಣ, ರಾಷ್ಟ್ರೀಯತೆಯನ್ನು ಕುರಿತು ಜಾಗೃತಿಯನ್ನು ಮೂಡಿಸಿದ್ದಾರೆ. ಇಲ್ಲಿ ಬರುವ ಭುವನೇಶ್ವರಿ,. ಕನ್ನಡಮ್ಮ, ಭಾರತಮಾತೆ, ಕನ್ನಡಮಾತೆ, ಕುಲದೇವಿ ಮೊದಲಾದವು ಹೆಣ್ಣಿನ ಬಗೆಗೆ ರೂಪುಗೊಂಡ ಸಂಕಥನದ ಸೌಮ್ಯರೂಪಗಳನ್ನು ಹುಟ್ಟುಹಾಕಿವೆ. ಹೆಣ್ಣನ್ನೇ ಹೀಗೆ ಆಯ್ಕೆಮಾಡಿಕೊಳ್ಳಲು ಕಾರಣ ಹೆಣ್ಣು ಗೌರವ, ಘನತೆಯ ಸಂಕೇತವಾಗಿರುವುದು. ಈ ಸೌಮ್ಯರೂಪದ ಜೊತೆಗೆ ಕ್ಷಾತ್ರತೇಜಸ್ಸಿನ, ವೀರತ್ವದ, ಕೆಚ್ಚಿನ, ಉಗ್ರರೂಪದ ಕ್ರಾಂತಿ, ಮಾರಿ, ಚಂಡಿ, ಚಾಮುಂಡಿಯ ವೀರತೆಯ ರೌದ್ರರೂಪಿ ಸಂಕಥನವನ್ನು ನೋಡಬಹುದು. ಆ ಕಾಲದ ಸಾಹಿತ್ಯದ ಎಲ್ಲಾ ಪ್ರಕಾರಗಳೂ ಚಾರಿತ್ರಿಕ, ಸಾಮಾಜಿಕ ವಿಚಾರಗಳನ್ನು ಹೇಳುವುದರೊಂದಿಗೆ ರಾಷ್ಟ್ರೀಯತೆ ಹಾಗೂ ಪ್ರಾದೇಶಿಕ ಏಕೀಕರಣವನ್ನು ಅಭಿವ್ಯಕ್ತಿಸಿವೆ.

"ಕರ್ನಾಟಕ ವಿದ್ಯಾವರ್ಧಕ ಸಂಘ, ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘ ಮತ್ತು ಕನ್ನಡ ಸಾಹಿತ್ಯ ಪರಿಷತ್ತುಗಳಂಥ ಸಂಸ್ಥೆಗಳು ಕರ್ನಾಟಕ ಮತ್ತು ಹಳೆಯ ಮೈಸೂರು ಪ್ರಾಂತ್ಯಗಳಲ್ಲಿ ನಡೆಸಿದ ಸಾಂಸ್ಕೃತಿಕ ಚಟುವಟಿಕೆಗಳು ಏಕೀಕರಣಕ್ಕೂ ಬಹಳಷ್ಟು ಸಹಾಯಕವಾದವು"[೬] ಎಂಬುದು ಡಾ. ಸಿ.ಆರ್. ಗೋವಿಂದ ರಾಜು ಅವರ ಅಭಿಪ್ರಾಯವಾಗಿದೆ.

ಒಟ್ಟಿನಲ್ಲಿ ಏಕೀಕರಣಕ್ಕೆ, ರಾಷ್ಟ್ರೀಯತೆಗೆ ಬೇಕಾದದ್ದು ಸಾಮರಸ್ಯದ ಚಿಂತನೆ ಹಾಗೂ ಉದ್ವೇಗವಿಲ್ಲದ ಸಮಚಿತ್ತ. ಅದನ್ನು ಕನ್ನಡ ಸಾಹಿತ್ಯ ಹಾಗೂ ಸಾಹಿತಿಗಳು ಮಾಡಿ ತೋರಿಸಿದರು. ಕನ್ನಡಿಗರಲ್ಲಿ ನೆಲ–ಜಲ, ನಾಡು–ನುಡಿ, ದೇಶ–ಭಾಷೆಯ ಬಗ್ಗೆ ಅಭಿಮಾನ ಮೂಡುವಂತೆ ಮಾಡಿ ಅದನ್ನು ನೂರ್ಮಡಿಯಾಗಿಸಿದ ಕೀರ್ತಿ ಸಾಹಿತಿಗಳಿಗೆ ಸಲ್ಲಬೇಕು.

ಇಂತಹ ಸಂದರ್ಭದಲ್ಲಿ ಬೆಂಗಳೂರು ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದ 'ಪ್ರಬುದ್ಧ ಕರ್ನಾಟಕ'ವು ರಾಷ್ಟ್ರೀಯತೆಯ ಚಿಂತನೆಗೆ ಏನನ್ನು ಕಾಣಿಕೆಯನ್ನಾಗಿ ನೀಡುತ್ತಿತ್ತು? ರಾಷ್ಟ್ರ ನಿರ್ಮಾಣ ಕೆಲಸದಲ್ಲಿ ಅದರ ಕಾರ್ಯ ವೈಖರಿ ಹೇಗಿತ್ತೆಂಬುದನ್ನು ಕೆಲವೇ ಕೆಲವು ಲೇಖನಗಳ ಮೂಲಕ ಪರಿಶೀಲಿಸಬಹುದಾಗಿದೆ.

---

೫. ಡಾ॥ ಕೆ. ಸಿ. ಶಿವಾರೆಡ್ಡಿ: ಕನ್ನಡದ ಹಾಡುಪಾಡು, ಅಧ್ಯಯನ ಮಂಡಲ, ಬೆಂಗಳೂರು ೨೦೦೩, ಪುಟ ೨೯.

೬. ಡಾ॥ ಸಿ.ಆರ್. ಗೋವಿಂದರಾಜು, ಹೊಸತುವಾಚಿಕೆ – ಸಾಹಿತ್ಯ ಸಂವಾದ – ನವಕರ್ನಾಟಕ ಪ್ರಕಾಶನ – ಸಂಪಾದಕ – ಡಾ॥ ಎಚ್. ಎಸ್. ರಾಘವೇಂದ್ರರಾವ್ ೧೮೨೭ನೇ ಪ್ರಕಟಣೆ.

## ಕನ್ನಡದಲ್ಲಿ ಬೌದ್ಧರು ಗ್ರಂಥಗಳನ್ನು ಬರೆದಿದ್ದರೇ?

'ಕನ್ನಡದಲ್ಲಿ ಬೌದ್ಧರು ಗ್ರಂಥಗಳನ್ನು ಬರೆದಿದ್ದರೇ?' ಎಂಬ ಪ್ರಶ್ನಾರೂಪಿ ತಲೆಬರಹದ ಲೇಖನವು ಪ್ರ.ಕ.ದಲ್ಲಿ ಪ್ರಕಟವಾದ ೧೯೨೦ರ **ದೀಪಾವಳಿ ಸಂಚಿಕೆಯ** ಮೊದಲ ಲೇಖನವಾಗಿದೆ. ಆದರೆ ಕರ್ತೃವಿನ/ಲೇಖಕನ ಹೆಸರು ಇದರಲ್ಲಿ ಇಲ್ಲ. ವಸಾಹತುಶಾಹಿಗೆ ಎದುರಾಗಿ ರಾಷ್ಟ್ರ ಕಟ್ಟುವ ಸಂದರ್ಭದಲ್ಲಿ ಬಂದ ಈ ಲೇಖನ ಭಾರತೀಯರ ಸ್ಥಳೀಯ ಪ್ರಜ್ಞೆಗೆ ಸಾಕ್ಷಿಯಾಗಿದೆ. ಕ್ರಿಸ್ತ ಉದಿಸಿದ ವರ್ಷವನ್ನು ಹೇಳಿ ಕ್ರೈಸ್ತ ಧರ್ಮವನ್ನು ವಿಶ್ವದಾದ್ಯಂತ ಪ್ರಚಾರ ಮಾಡಲು ಹವಣಿಸಿದ – ಪ್ರಚಾರ ಮಾಡಿದ ವಸಾಹತುಶಾಹಿಗಳ ಮುಂದೆ ಭಾರತೀಯರು ಭಾರತದಿಂದ ಮರೆಯಾಗುತ್ತಿದ್ದ ಒಂದು ಧರ್ಮವನ್ನು ಕುರಿತು ಅದು ಕ್ರಿಸ್ತಪೂರ್ವದಲ್ಲೇ ಉದಯಿಸಿದ್ದು ಎಂದು ಅದರ ತತ್ವಗಳ, ಸಾಹಿತ್ಯಗಳ, ಚರ್ಚೆ ಮಾಡುವ ಸಂದರ್ಭದಲ್ಲಿ ಬಂದಿದ್ದೇ ಈ ಲೇಖನ. 'ನಮ್ಮದು' ಎಂಬುದನ್ನು ವಸಾಹತುಶಾಹಿಗಳ ಮುಂದೆ ತೋರಿಸಬೇಕಾದ ಸಂದರ್ಭದಲ್ಲಿ ಬೌದ್ಧರು ಕನ್ನಡದಲ್ಲಿ ಗ್ರಂಥಗಳನ್ನು ರಚಿಸಿದ್ದರೇ?' ಎಂದು ಪ್ರಶ್ನಿಸುವ ಲೇಖಕರು ಕವಿರಾಜಮಾರ್ಗದ ಪೂರ್ವದಲ್ಲಿ ಕನ್ನಡ ಸಾಹಿತ್ಯದ ಸ್ಥಿತಿಯು ಹೇಗಿತ್ತೆಂಬುದನ್ನು ನಿರ್ಧರಿಸಲು –

ನುಡಿಗೆಲ್ಲಂ ಸಲ್ಲದ ಕ
ನ್ನಡದೊಳ್ ಚತ್ತಾಣಮುಂ ಬೆದೆಂಡೆಯುಮೆಂದೀ ।
ಗಡಿನ ನೆಗಳ್ತೆಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರಾತನಕವಿಗಳ್ ॥

ಎಂಬ ಪದ್ಯದ ಜೊತೆಗೆ ಇನ್ನೂ ಎರಡು ಉದಾಹರಣೆಗಳನ್ನು ಕೊಡುತ್ತಾ ಗದ್ಯಪದ್ಯ ಮಿಶ್ರಿತ ಗ್ರಂಥಗಳಿಗೆ ಗದ್ಯಕಥೆ ಎಂಬ ಹೆಸರಿತ್ತು. ಪದ್ಯ ಕಾವ್ಯಗಳನ್ನು ಚತ್ತಾಣ, ಬೆದಂಡೆ ಎಂಬ ಎರಡು ಭಾಗಗಳಾಗಿ ವಿಂಗಡಿಸಿದ್ದರು. ಪ್ರಾಸದಿಂದ ಯತಿಭಂಗವು ದೋಷವಿಲ್ಲದಂತಾಯಿತು. ಹೀಗಾದದ್ದು ನೃಪತುಂಗನ ಕಾಲಕ್ಕಿಂತ ಕೆಲವು ಶತಮಾನಗಳ ಹಿಂದೆಯೇ ಇರಬೇಕು. 'ಪುರಾತನ ಕವಿಗಳೆಂದರೆ ಆತನಿಗಿಂತಲೂ ಒಂದರೆಡು ಶತಮಾನಗಳ ಹಿಂದಿದ್ದ ಅಲಂಕಾರಿಕರಾಗಿರಬೇಕು. ಅವರಿಗಿಂತಲೂ ಪೂರ್ವದಲ್ಲಿ ವಿಮಳೋದಯ, ನಾಗಾರ್ಜುನಾದಿಗಳು ಇದ್ದಿರಬೇಕು. ಗದ್ಯಕ್ಕಿಂತಲೂ ಮುಂಚೆ ಪದ್ಯ ಹುಟ್ಟುವುದರಿಂದ ಇವರಿಗಿಂತಲೂ ಹಿಂದೆ "ಪರಮ ಶ್ರೀವಿಜಯ ಕವೀಶ್ವರ ಪಂಡಿತ ಚಂದ್ರಲೋಕಪಾಲಾದಿ" ಪದ್ಯ-ಕಾವ್ಯಕರ್ತರು ಇರಬೇಕು. ಇವರೊಂದಿಗೆ ಇತರ ಸಾಮಾನ್ಯ ಲೇಖಕರೂ ಇರಬೇಕು. ಇದು ಕೇವಲ ತಮ್ಮ ಊಹೆಯಲ್ಲ ಎಂದು ಹೇಳುವ ಲೇಖಕರು, ಕವಿರಾಜಮಾರ್ಗದ ಒಂದು ಪದ್ಯವನ್ನು ಉದಾಹರಣೆಯಾಗಿ ಕೊಡುತ್ತಾರೆ.

ದೋಸಮಿನಿತೆಂದು ಬಗೆದು
ದ್ಭಾಸಿಸಿ ತಱಸಂದು ಕನ್ನಡಂಗಳೊಳೆಂದುಂ ।
ವಾಸುಗಿಯುಮಱಯಲಾಱದೆ
ಬೇಸಱುಗುಂ ದೇಸಿ ಬೇಱಬೇಱಪ್ಪುದಱುಂ ॥

ಇದರಿಂದ ದೋಷವನ್ನೊಳಗೊಂಡ ಅನೇಕ ಗ್ರಂಥಗಳಿದ್ದುದು ಮಾತ್ರವಲ್ಲದೇ, ಬೇರೆ ಬೇರೆ ದೇಸಿಯಿತ್ತೆಂದು ಸ್ಪಷ್ಟವಾಗುತ್ತದೆ.

ಕ್ರಿಸ್ತಪೂರ್ವಕ್ಕೆ ಕೆಲವು ಶತಮಾನಗಳ ಹಿಂದೆಯೇ, ಅಂದರೆ ಚಂದ್ರಗುಪ್ತನ ಕಾಲದಲ್ಲಿಯೇ ಜೈನಮತವು ಕರ್ನಾಟಕದಲ್ಲಿದ್ದು, ೯ನೇ ಶತಮಾನದಿಂದ ೧೨-೧೩ನೇ ಶತಮಾನದವರೆಗೂ ವಿಶೇಷ ಗ್ರಂಥ ರಚನೆ ಮಾಡಿರುವವರು ಜೈನ ಕವಿಗಳಾದ್ದರಿಂದ, ೯ನೆಯ ಶತಮಾನಕ್ಕೆ ಮೊದಲೇ ಜೈನರು ಗ್ರಂಥರಚನೆ ಮಾಡಿರುವುದು ಶಾಸನಗಳಿಂದ ತಿಳಿದು ಬಂದಿರುವುದರಿಂದ ರೈಸ್ ಮೊದಲಾದ ಪಂಡಿತರು ನೃಪತುಂಗನಿಗಿಂತ ಮೊದಲಿನ ಕನ್ನಡ ಗ್ರಂಥಕಾರರೆಲ್ಲರೂ ಜೈನರೇ ಎಂದು ಇತ್ಯರ್ಥ ಮಾಡಿದಂತೆ ಕಾಣುತ್ತದೆ ಎಂದು ಲೇಖಕರು ಹೇಳುತ್ತಾರೆ.

ಆದರೆ ನೃಪತುಂಗನು ತಾನು ಹೇಳಿದ ಕವಿಗಳೆಲ್ಲರೂ ಜೈನರೆಂದು ಹೇಳಿಲ್ಲ. ಹಾಗಾಗಿ ಹಿಂದಿನ ಕವಿಗಳು ಜೈನರಲ್ಲದಿರಬಹುದು ಎಂದು ಸಂಶಯಪಡಲು ಇತರ ಕಾರಣಗಳಿವೆ. ಮೊದಲನೆಯದು : ಪಂಪರನ್ನರು ವಿಮಲೋದಯ ಮುಂತಾದ ಕನ್ನಡ ಕವಿಗಳನ್ನು ಸ್ಮರಿಸಿಲ್ಲ. ಇವರು ಯಾವ ಕನ್ನಡ ಕವಿಗಳನ್ನೂ ಸ್ಮರಿಸಿಯೇ ಇಲ್ಲವೆನ್ನಬಹುದು. ಆದರೆ ಹಿಂದಿನ ಕವಿಗಳನ್ನು ತಪ್ಪದೇ ಸ್ಮರಿಸುವ ಜೈನಕವಿಗಳೂ ವಿಮಲೋದಯರನ್ನು ಸ್ಮರಿಸಿಲ್ಲ. ವಿಮಲೋದಯಾದಿಗಳು ಪ್ರಸಿದ್ಧ ಕವಿಗಳಲ್ಲಿ ಶ್ರೇಷ್ಠರೆಂದು ನೃಪತುಂಗ ಹೇಳಿದ್ದಾನೆ. ಒಬ್ಬ ಜೈನ ಲೇಖಕರೂ, ಕವಿಗಳೂ ಅವರ ಹೆಸರನ್ನು ಹೇಳದಿರುವುದರಿಂದ ಅವರು ಜೈನರಲ್ಲದಿರುವುದೇ ಕಾರಣವಿರಬಹುದೆಂದು ಲೇಖಕರು ಊಹಿಸುತ್ತಾರೆ.

ಎರಡನೆಯದು : ಪಂಪನು ಆದಿಪುರಾಣದ ಪೀಠಿಕೆಯಲ್ಲಿ "ಆದಿಪುರಾಣದೊಳರಿವುದು ಕಾವ್ಯಧರ್ಮಮಂ ಧರ್ಮಮುಮಂ" ಎಂದು ಹೇಳಿದ್ದಾನೆ. ಹಾಗಾದರೆ ಪಂಪನಿಗಿಂತ ಮೊದಲು ಯಾರೂ ಕನ್ನಡದಲ್ಲಿ ಜೈನ ಗ್ರಂಥಗಳನ್ನು ಬರೆದಿರಲಿಲ್ಲವೇ ಎಂದು ಸಂಶಯವಾಗುತ್ತದೆ. ಆಂಡಯ್ಯನನ್ನು ಬಿಟ್ಟು ಮಿಕ್ಕ ಜೈನ ಕವಿಗಳೆಲ್ಲರೂ ಗ್ರಂಥಗಳನ್ನು ಬರೆದರೂ, ಬರೆಯದಿದ್ದರೂ ಪುರಾಣಗಳನ್ನು ಮಾತ್ರ ಬರೆದಿದ್ದಾರೆ.

ಕರ್ನಾಟಕ ರಾಜ್ಯದ ಉತ್ತರ ಭಾಗದಲ್ಲಿ ಮೊದಲು ಬೌದ್ಧಮತವು ಹೆಚ್ಚು ಪ್ರಾಬಲ್ಯದಲ್ಲಿತ್ತೆಂದೂ, ಆಮೇಲೆ ಕ್ರಮೇಣ ಜೈನಮತವು ಪ್ರಾಶಸ್ತ್ಯಕ್ಕೆ ಬಂದಿತೆಂದು ತಿಳಿದುಬರುತ್ತದೆ. ಈ ಬಗೆಗಿನ ವಿವರವನ್ನು ಲೇಖಕರು ಡಾ॥ ಭಂಡಾರ್ಕರ್‌ರವರ History of Deccan ಎಂಬ ಗ್ರಂಥದ ಆಧಾರದ ಮೇಲೆ ತಿಳಿಸುತ್ತಾರೆ.

'ಅಶೋಕನ ಶಾಸನಗಳು ಮೈಸೂರು ದೇಶದ ಉತ್ತರ ಭಾಗದಲ್ಲಿ ಸಿಕ್ಕುವುದರಿಂದಲೂ, ಅಶೋಕನು ಬನವಾಸಿ ಮಹಿಷ ಮಂಡಲಗಳಿಗೆ ಬೌದ್ಧಮತ ಬೋಧಕರನ್ನು ಕಳುಹಿಸಿದನೆಂದು ತಿಳಿದುಬರುವುದರಿಂದಲೂ ಕ್ರಿಸ್ತಶಕಕ್ಕೆ ಪೂರ್ವದಲ್ಲಿಯೇ ಬೌದ್ಧಮತವು ಕರ್ನಾಟಕಕ್ಕೆ ವ್ಯಾಪಿಸಿತ್ತೆಂದು ಊಹಿಸಬಹುದು. ಕ್ರಿಸ್ತಶಕದ ಆದಿಭಾಗದಲ್ಲಿ ಶಾತವಾಹನರು, ನಂತರ ಪಲ್ಲವರೂ ಈ ಮತಕ್ಕೆ ಪ್ರೋತ್ಸಾಹ ಕೊಟ್ಟಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ. ಶಾತವಾಹನರು ಬೌದ್ಧಮತಾವಲಂಬಿಗಳೇ ಎಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಅವರ ಕಾಲದಲ್ಲಿ ಸಾಮಂತರು, ರಾಜರು, ಹೆಗ್ಗಡೆಗಳು, ವ್ಯಾಪಾರಿಗಳು, ಬಡಗಿಗಳು ಮುಂತಾದ ಅನೇಕರು ಬೌದ್ಧ ದೇವಾಲಯಗಳನ್ನು, ಭಿಕ್ಷುಗಳಿಗೆ ವರ್ಷಾಕಾಲದಲ್ಲಿ ವಾಸಮಾಡಲು ಮಠಗಳನ್ನು ಕಟ್ಟಿಸಿಕೊಟ್ಟಂತೆ ತಿಳಿದುಬರುತ್ತದೆ. ಪಲ್ಲವರ ಕಾಲದಲ್ಲೂ ಬೌದ್ಧಮತವು ವಿಶೇಷವಾಗಿ ಪ್ರಬಲವಾಗಿತ್ತೆಂದು ಹೇಳುವ ಲೇಖಕರು. ನಂತರದ ಚಾಳುಕ್ಯರು ಮತ್ತು ರಾಷ್ಟ್ರಕೂಟರು ಬ್ರಾಹ್ಮಣಮತಾವಲಂಬಿಗಳಾಗಿದ್ದು, ಅವರು ಬೌದ್ಧಮತಕ್ಕೆ ಅಷ್ಟು ಪ್ರೋತ್ಸಾಹ ಕೊಟ್ಟಂತೆ ಕಂಡುಬರುವುದಿಲ್ಲವೆನ್ನುತ್ತಾರೆ. ನೃಪತುಂಗನು ತಾನೇ ಜೈನ ಮತಾವಲಂಬನೆ ಮಾಡಿ, ಜೈನಮತಕ್ಕೆ ಪ್ರೋತ್ಸಾಹ ಕೊಡುತ್ತಾನೆ. ಹೀಗೆ ಶಾಸನಗಳಿಂದ ನೃಪತುಂಗನ ಕಾಲಕ್ಕೆ ಹಿಂದೆ

ಬೌದ್ಧಮತವು ಉತ್ತರ ಕರ್ಣಾಟಕದಲ್ಲಿ ಕೆಲಕಾಲ ಪ್ರಾಬಲ್ಯದಲ್ಲಿದ್ದು ನಂತರ ೮-೯ನೆಯ ಶತಮಾನದ ಹೊತ್ತಿಗೆ ಸಂಪೂರ್ಣ ಹೀನಸ್ಥಿತಿಯನ್ನು ಹೊಂದಿತೆಂದು ತಿಳಿದುಬರುತ್ತದೆ. ಸುಮಾರು ೧೨ನೇ ಶತಮಾನದವರೆಗೂ ಬೌದ್ಧಧರ್ಮವು ಹಾಗೂ ಹೀಗೂ ಅಸ್ತಿತ್ವದಲ್ಲಿತ್ತೆಂದು ಧಾರವಾಡ ಪ್ರಾಂತದ ಒಂದು ಶಿಲಾಶಾಸನದಿಂದ ತಿಳಿದುಬರುತ್ತದೆಂದು ಲೇಖಕರು ಹೇಳುತ್ತಾರೆ.

ಬೌದ್ಧಮತವು ಪ್ರಾಬಲ್ಯ ಸ್ಥಿತಿಯಲ್ಲಿದ್ದಾಗ ಬೌದ್ಧರು ಗ್ರಂಥರಚನೆ ಮಾಡಿರಲಾರರೇ? ಏಕೆಂದರೆ, ಬುದ್ಧನು ಉಪದೇಶ ಮಾಡಿದ್ದು ದೇಶಭಾಷೆಯಲ್ಲಿಯೇ. ಬೌದ್ಧ ಗ್ರಂಥಗಳು ಮೊದಮೊದಲು ಹುಟ್ಟಿದ್ದು ದೇಶ ಭಾಷೆಯಲ್ಲಿಯೇ. ಹೀಗಿರುವಾಗ ಮತಪ್ರಚಾರಕ್ಕಾಗಿ ಬಂದ ಬೌದ್ಧರು ಕನ್ನಡದಲ್ಲಿ ಗ್ರಂಥರಚನೆ ಮಾಡಿರಬೇಕೆಂದು ಊಹಿಸುವುದು ಅಸಂಗತವೇ? ಎಂದು ಲೇಖಕರು ಪ್ರಶ್ನಿಸುತ್ತಾರೆ. ಬೌದ್ಧಮತದ ಪ್ರಾಬಲ್ಯದ ಕಾಲದಲ್ಲಿ ಬೌದ್ಧರಲ್ಲದವರೂ ಗ್ರಂಥ ರಚನೆ ಮಾಡಿರಬಹುದು. ಅಲ್ಲದೆ ಬೌದ್ಧಮತ ವಿಚಾರಗಳನ್ನು ಚೆನ್ನಾಗಿ ಪರಿಶೀಲನೆ ಮಾಡಿರುವ ರಿಸ್ ಡೇವಿಡ್ಸ್ ಸಾಹೇಬರು ಪಾಳೀ ಗ್ರಂಥಗಳಿಂದ ಕರ್ಣಾಟಕದಲ್ಲಿ ಪಂಡಿತರಾದ ಅನೇಕ ಬೌದ್ಧರಿದ್ದರೆಂದು ತಿಳಿದುಬರುವುದಾಗಿ ಹೇಳುತ್ತಾರೆ. ಅವರ ಗ್ರಂಥಗಳು ಈಗ ಲಭ್ಯವಿಲ್ಲದಿರುವುದರಿಂದ ಅವರ ಕನ್ನಡ ಗ್ರಂಥರಚನೆಯು ಆಕಾಶ ಕುಸುಮದಷ್ಟು ಅಸಂಭವ ಎಂದು ಕೆಲವರು ಆಕ್ಷೇಪಿಸಿದ್ದಾರೆ.

ಅದಕ್ಕೆ ಉತ್ತರವಾಗಿ ಲೇಖಕರು 'ನಿಜ ಅವರ ಗ್ರಂಥಗಳೊಂದೂ ಈಗ ಇಲ್ಲ. ಅವರೇ ನಿರ್ನಾಮರಾಗಿದ್ದಾರೆ. ಇನ್ನು ಅವರ ಪುಸ್ತಕಗಳಿಗೂ ಅದೇ ಗತಿ ಬಂದಿರುವುದಲ್ಲಿ ಆಶ್ಚರ್ಯವೇನು? ಕನ್ನಡದಲ್ಲಿ ಇಷ್ಟು ಗ್ರಂಥರಚನೆ ಮಾಡಿದ ಜೈನರು ತೆಲುಗಿನಲ್ಲಿ ಬರೆಯದೇ ಇರಲಿಲ್ಲ. ಆದರೆ ಅವು ಒಂದಾನೊಂದು ಕಾಲದಲ್ಲಿ ಭಸ್ಮೀಭೂತವಾಗಿ ಹೋದವು. ಈಗ ಜೈನರು ತೆಲುಗಿನಲ್ಲಿ ಗ್ರಂಥಗಳನ್ನು ಬರೆಯಲೇ ಇಲ್ಲವೆಂದು ಹೇಳಲಾಗುವುದೇ?' ಎಂದು ಲೇಖಕರು ಪ್ರಶ್ನಿಸುತ್ತಾರೆ.

ಹೀಗೆ ಕನ್ನಡದಲ್ಲಿ ಮೊದಮೊದಲು ಗ್ರಂಥಗಳು ಹುಟ್ಟಿದ್ದು ಉತ್ತರ ಕರ್ಣಾಟಕದಲ್ಲಿಯೇ ಆಗಿರುವುದರಿಂದಲೂ, ಬೌದ್ಧಮತವು ಆ ಪ್ರದೇಶದಲ್ಲಿ ವಿಶೇಷವಾಗಿ ಪ್ರಬಲವಾಗಿದ್ದಿದ್ದರಿಂದಲೂ, ಮತಪ್ರಚಾರಕರಾದ ಬೌದ್ಧರಿಗೆ ಕನ್ನಡದಲ್ಲಿ ಬರೆಯುವ ಅಗತ್ಯವಿದ್ದಿದ್ದರಿಂದಲೂ, ಕರ್ಣಾಟದಲ್ಲಿ ಪಂಡಿತರಾದ ಬೌದ್ಧರು ಇದ್ದರೆಂದು ತಿಳಿದು ಬಂದಿರುವುದರಿಂದಲೂ, ಜೈನ ಪುರಾಣಗಳನ್ನು ಬರೆಯಲು ಪಂಪನು ಆದಿಕವಿಯಾಗಿರಬಹುದೆಂದು ಊಹಿಸಲು ಕಾರಣವಿರುವುದರಿಂದಲೂ, ನೃಪತುಂಗನ ಕಾಲಕ್ಕೆ ಬೌದ್ಧರೇ ಕನ್ನಡದಲ್ಲಿ ಗ್ರಂಥರಚನೆ ಮಾಡಿರಬಹುದೆಂದು ಊಹಿಸಲು ಅವಕಾಶವಿರುವುದಿಲ್ಲವೇ? ಎಂದು ಲೇಖಕರು ಪ್ರಶ್ನಿಸುತ್ತಾರೆ. ಅಂದರೆ ಅವಕಾಶವಿತ್ತು, ಬೌದ್ಧರು ಕೃತಿರಚನೆಯನ್ನು ಮಾಡಿದ್ದರೆಂದು ಅರ್ಥ. ಕೊನೆಯಲ್ಲಿ, ಹಾಗಾದರೆ ವಿಮಲೋದಯ ನಾಗಾರ್ಜುನಾದಿಗಳು ಜೈನರೋ, ಬೌದ್ಧರೋ? ಎಂದು ಕೇಳುತ್ತಾರೆ. ವಿಮಲೋದಯ ನಾಗಾರ್ಜುನಾದಿಗಳು ಬೌದ್ಧರಿರಬೇಕೆಂಬುದೇ ಲೇಖಕರ ಅಭಿಪ್ರಾಯವಾಗಿದೆ. ಅದನ್ನು ಅವರು ತಮ್ಮ ಅಧ್ಯಯನದ ಮೂಲಕ ಸಮರ್ಥಿಸಿಯೂ ಇದ್ದಾರೆ.

ಈ ಲೇಖನವು ಕನ್ನಡ ನಾಡಿನ ಗತಕಾಲದ ಚರಿತ್ರೆಯ ಸಮೃದ್ಧತೆಯನ್ನು ಕುರಿತು ಶೋಧಿಸುತ್ತದೆ. ರಾಷ್ಟ್ರ ನಿರ್ಮಾಣದ ಪ್ರಕ್ರಿಯೆಯಲ್ಲಿ ಗತವನ್ನು ವರ್ತಮಾನದ ಅನುಕೂಲಕ್ಕೆ ತಕ್ಕಂತೆ ಪುನರ್ರಚಿಸುವುದು ಒಂದು ಮುಖ್ಯವಾದ ಲಕ್ಷಣವಾಗುತ್ತದೆ. ಆದ್ದರಿಂದ ಈ ಕಾಲಘಟ್ಟದಲ್ಲಿ ಪ್ರಾಚೀನ ಸಾಹಿತ್ಯ, ಚರಿತ್ರೆ ಮತ್ತು ಸಂಸ್ಕೃತಿಯ ಶ್ರೇಷ್ಠತೆಯನ್ನು ಅಥವಾ ಮೌಲ್ಯವನ್ನು ಕುರಿತು ಹಾಡಿಹೊಗಳುವಂತಹ ಲೇಖನಗಳು ಯಥೇಚ್ಛವಾಗಿ ಸಿಗುತ್ತವೆ. ಇದೇ ಕಾಲಘಟ್ಟದಲ್ಲಿ ಬೌದ್ಧಧರ್ಮವನ್ನು ಕುರಿತು ಅತ್ಯಂತ ಮಹತ್ವಪೂರ್ಣವಾದ ಹಾಗೂ ಆಳವಾದ ಸಂಶೋಧನೆಯನ್ನು ಜೆ.ಪಿ. ರಾಜರತ್ನಂ

ಕೈಗೊಂಡಿದ್ದರು. ತದನಂತರ ಮ.ಸೂ. ಕೃಷ್ಣಮೂರ್ತಿಯವರು ಈ ಅಧ್ಯಯನವನ್ನು ಮುಂದುವರಿಸಿದರು.

ಅಖಿಲ ಭಾರತ ಮಟ್ಟದಲ್ಲಿ ವೈದಿಕ ಧರ್ಮ, ವೈದಿಕ ರಚನೆಗಳು ಮುನ್ನಡೆಯನ್ನು ಪಡೆಯುತ್ತಿದ್ದ ಅವಧಿಯಲ್ಲಿ ಭಾರತದ ಬಹುಮುಖೀ ಸಂಸ್ಕೃತಿಯನ್ನು ಕುರಿತು ನಡೆಯುತ್ತಿದ್ದ ಶೋಧಗಳು ಭಾರತದ ರಾಷ್ಟ್ರೀಯತೆಗೆ ಒಂದು ವಿಭಿನ್ನವಾದ ವ್ಯಾಖ್ಯೆಯನ್ನು ನೀಡುತ್ತಿದ್ದವು. ಈ ವ್ಯಾಖ್ಯೆಯು 'ವಿವಿಧತೆಯಲ್ಲಿ ಏಕತೆ' ಎಂಬ ಹೇಳಿಕೆಗೆ ಪೂರಕವಾಗಿತ್ತು. ಇದೇ ಸಂದರ್ಭದಲ್ಲಿ ಬೇಂದ್ರೆಯವರು ರಚಿಸಿದ ಕನ್ನಡ ಜೀವನ ಲಹರಿ ಕವನವು

"ಇದು ವೈಷ್ಣವ ಇದು ಜೈನವು ಇದು ಶಾಕ್ತವು ಶೈವ
ಇದು ಜೀವನು ಇದು ಜೀವನ – ಪುರುಷಾರ್ಥವು ದೈವ
ಒಮ್ಮುಖವಿದು ಹಲಮೊಗದೊಲು ತೋರುವ ತರತಮತೆ
ಇದು ನಿಮ್ಮದು ಇದು ನಮ್ಮದು ಇದು ಎಲ್ಲರ ಮಮತೆ" *

ಎಂದು 'ವಿವಿಧತೆಯಲ್ಲಿ ಏಕತೆ'ಯನ್ನಷ್ಟೇ ಅಲ್ಲದೇ, 'ಸರ್ವಧರ್ಮ ಸಮಭಾವ' ಹಾಗೂ 'ಅನ್ಯಧರ್ಮ ಸಹಿಷ್ಣುತೆ'ಯನ್ನು ಸಾರುತ್ತದೆ.

## ಶ್ರೀ ಕೃಷ್ಣರಾಜ ರಜತ ಮಹೋತ್ಸವ :

ಕಾಯಿ ತಾಯಿ ಕೃಪೆಯ ತೋರಿ
ನಮ್ಮ ಕೃಷ್ಣನ;
ಬೆಳ್ಳಿ ಬೆಟ್ಟದೊಡತಿ, ಗೌರಿ,
ಬೆಳ್ಳಿಯೊಸಗೆಗೊಸಗೆ ಬೀರಿ
ಕಾಯಿ ಕೃಷ್ಣನ.

ಏಳು, ವಾಣಿ, ವೀಣೆದಾಳು
ಅಮೃತವಾಣಿಯಿಂದ ಹೇಳು
ಪುಣ್ಯದರಸು, ಧರ್ಮದಾಳು
ದೊರೆಯ ಕೃಷ್ಣನ.

ಹೊನ್ನು ನಡೆಯ ಹೊನ್ನು ನುಡಿಯ,
ಕನ್ನಡಿಗರ ವಯಿರ ಮುಡಿಯ,
ಒಡೆಯ ಕೃಷ್ಣನ"[೧]

---

* ದ.ರಾ. ಬೇಂದ್ರೆ – ಕನ್ನಡ ಜೀವನ ಲಹರಿ – ಔದುಂಬರ ಗಾಥೆ – ಸಂ. ೨ – ದರ್ಶನ : ದ.ರಾ. ಬೇಂದ್ರೆ – ಜೀವನ ಮಹಾಕಾವ್ಯ – ಸಂ. ವಾಮನ ಬೇಂದ್ರೆ – ಪು.ಸಂ. ೪೦೧.

೧. ಶ್ರೀ – ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಾಥ – ಪ್ರಕ. ೧೯೨೭ – ಪ್ರಭವ ಸಂವತ್ಸರ – ೩೧ನೇ (ವಿನಾಯಕನ) ಸಂಚಿಕೆ.

ಸ್ವಾತಂತ್ರ್ಯ ಪೂರ್ವದಲ್ಲೇ 'ಮಾದರಿ ರಾಜ್ಯ'ವೆಂದು ಹೆಸರಾದ ಮೈಸೂರಿನ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರ್‌ರವರ ಆಳ್ವಿಕೆಯ ರಜತ ಮಹೋತ್ಸವದ ವರದಿಯನ್ನು ವಸ್ತುಕೋಶದಲ್ಲೂ.[೧] ಸಂಚಿಕೆಯ ಮೊದಲಲ್ಲೇ 'ಶ್ರೀ'ಯವರು ಬರೆದಿರುವ ಶ್ರೀಕೃಷ್ಣರಾಜ ರಜತ ಮಹೋತ್ಸವ ಪ್ರಗಾಥವನ್ನು ನೀಡುವುದರ ಮೂಲಕ ಬೆಂ.ಸೆಂ.ಕಾ.ಕ. ಸಂಘದ 'ಪ್ರಬುದ್ಧ ಕರ್ಣಾಟಕ'ವು ವಸಾಹತು ಪ್ರಭುತ್ವದ ಎದುರು ಸ್ಥಳೀಯ ಪ್ರಭುತ್ವದ ಪತಾಕೆಯನ್ನು ಎತ್ತಿಹಿಡಿದಿದೆ ಎಂದು ಹೇಳಬಹುದು. ವಿಜಯನಗರದ ಅರಸರ ನಂತರ ನಾಡಹಬ್ಬವನ್ನು ಅತ್ಯಂತ ವೈಭವವಾಗಿ ಆಚರಿಸುತ್ತಾ ಕನ್ನಡಿಗರ ಸಂಸ್ಕೃತಿಯನ್ನು ಉಳಿಸಿ ಬೆಳೆಸಿದ ಕೀರ್ತಿಯನ್ನು ಪಡೆದ ಮೈಸೂರು ಒಡೆಯರಲ್ಲೇ ಅತ್ಯಂತ ಪ್ರಮುಖರಾದ ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರ ರಜತ ಮಹೋತ್ಸವದ ವಿಷಯವೇ ಕೆಲವು ದಿನಗಳಿಂದ ಕನ್ನಡಿಗರ ಕಿವಿ–ಕಣ್ಣು–ಮನಗಳಲ್ಲಿ ತುಂಬಿಕೊಂಡಿರುವುದೆಂದು ಈ ಮಹೋತ್ಸವವನ್ನು ಕಂಡು ಸಂಭ್ರಮ–ಸಡಗರ–ಆನಂದ ಪಡದವರಿಲ್ಲ ಎಂದು ಸಂಪಾದಕರು ಹೇಳಿದ್ದಾರೆ. ಯಾವ ಪತ್ರಿಕೆಯನ್ನೇ ನೋಡಿದರೂ ಇದರ ವರ್ಣನೆ. ಕನ್ನಡ ಪತ್ರಿಕೆಗಳೇ ಅಲ್ಲದೇ 'ಬೊಂಬಾಯಿ ಕ್ರಾನಿಕಲ್', 'ಹಿಂದೂ' ಪತ್ರಿಕೆಗಳೂ ಇದಕ್ಕೆ ಸಂಬಂಧಿಸಿದಂತೆ ಸುಂದರ, ವಿಷಯ ಪರಿಪೂರ್ಣ ಸಂಚಿಕೆಗಳನ್ನು ಪ್ರಕಟಗೊಳಿಸಿವೆ ಎಂದು ಬರೆಯುತ್ತಾರೆ. ಎಲ್ಲಾ ಪತ್ರಿಕೆಗಳ ಲೇಖನಗಳಲ್ಲಿ ಮೈಸೂರು ಹೇಗೆ 'ಮಾದರಿ ಸಂಸ್ಥಾನ'ವಾಗಿ ಹೆಸರಾಗಿದೆ ಎಂಬುದನ್ನು ವಿವಿಧ ವಾಗ್ವೈಖರಿಯಿಂದ ವಿವರಿಸಿರುತ್ತಾರೆ. ಅವನ್ನು ಕನ್ನಡಿಗರು ಓದಿ ಆನಂದ ಪಟ್ಟಿರುವರೆಂಬುದರಲ್ಲಿ ಸಂಶಯವಿಲ್ಲವೆಂದು ಹೇಳುತ್ತಾರೆ. ಕನ್ನಡಿಗರಿಗಾಗಿ **'ರಜತ ಪೂಜೋತ್ಸವ ಸಂಚಿಕೆ'**ಯನ್ನು ಪ್ರಕಟಿಸಿದ ವಿಶ್ವ ಕರ್ಣಾಟಕವು ಸುಸ್ವಾದ ಔತಣವನ್ನು ಬಡಿಸಿದೆ ಎನ್ನುತ್ತಾರೆ ಸಂಪಾದಕರು. ಮಹಾರಾಜರಿಗೆ ಗೌರವ ಸೂಚಕವಾಗಿ ಪ್ರಬುದ್ಧ ಕರ್ಣಾಟಕವು ೩೧ನೇ ಸಂಚಿಕೆಯ ಆರಂಭದಲ್ಲಿ 'ಶ್ರೀ'ಯವರ 'ಶ್ರೀಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ'ವನ್ನು ಪ್ರಕಟಿಸಿ ವಸ್ತುಕೋಶದಲ್ಲಿ ಮಹಾರಾಜರ ಕೃಪೆಯಿಂದ ಕಲಾಸಾಹಿತ್ಯಗಳ ಬೆಳವಣಿಗೆಯನ್ನು ಸೂಕ್ಷ್ಮವಾಗಿ ಸೂಚಿಸಿದೆ. ಆದ್ದರಿಂದ ಸಂಚಿಕೆಯನ್ನು ರಜತೋತ್ಸವ ಸಂಚಿಕೆಯೆಂದು ಕರೆದಿದೆ.

ಒಡೆಯರ ವಂಶದಲ್ಲಿ ಶ್ರೀಮನ್ ನಾಲ್ವಡಿ ಕೃಷ್ಣರಾಜ ಒಡೆಯರವರ ಉದಯದೊಡನೆ ಸೂರ್ಯೋದಯ ವಾಯಿತೆಂದು ಹೇಳುತ್ತಾರೆ. ಶ್ರೀಮನ್ ಮಹಾರಾಜಾರವರು ಸ್ಥಾಪಿಸಿರುವ 'ಭಾಷೋಜ್ಜೀವಿನೀ ಪಾಠಶಾಲೆ', 'ಸಂಸ್ಕೃತ ಮಹಾ ಪಾಠಶಾಲೆ', 'ವಿಶ್ವವಿದ್ಯಾನಿಲಯ', 'ಸಾವಿರಾರು ಸ್ಕೂಲುಗಳು' ಶ್ರೀಮನ್ಮಹಾರಾಜರವರ ಸಾರಥ್ಯದಿಂದ ನಡೆಯುತ್ತಿದ್ದವು. ಮಹಾರಾಜರು ವಿಶೇಷ ಸಂದರ್ಭ ಬಂದಾಗ ಕನ್ನಡದಲ್ಲಿ ಭಾಷಣ ಮಾಡುವ ಪದ್ಧತಿಯನ್ನು ಜಾರಿಗೆ ತಂದರು. ಇವರ ಕಾಲದಲ್ಲಿಯೇ 'ಕರ್ಣಾಟಕ ಗ್ರಂಥಮಾಲೆ', 'ಕರ್ಣಾಟಕ ಚಂದ್ರಿಕೆ' ಮುಂತಾದ ಕೃತಿಗಳ ಮೂಲಕ ಹೊಸಗನ್ನಡ ಸಾಹಿತ್ಯವು ಹುಟ್ಟಿತೆಂದು ಹೇಳಬಹುದು. ವಿದೇಶೀಯರಾದರೂ ವಿಲಕ್ಷಣ ಜ್ಞಾನಶಕ್ತಿ ಸಂಪನ್ನರಾದ ರೈಸ್, ಕಿಟ್ಟಲ್ ಮುಂತಾದ ಮಹನೀಯರು ಮೈಸೂರು ದೇಶದ ಪ್ರಾಚೀನ ಚರಿತ್ರೆ, ಸಾಹಿತ್ಯಗಳನ್ನು ಆಮೂಲಾಗ್ರವಾಗಿ ಶೋಧಿಸಿ ಕನ್ನಡಿಗರಿಗೆ ಆತ್ಮಗೌರವವನ್ನೂ, ಸನ್ಮಾನವನ್ನೂ ತಂದರು. 'ಪಂಪ ಭಾರತ', 'ಕವಿರಾಜ ಮಾರ್ಗ', 'ಶಬ್ದಾನುಶಾಸನ'ದಂಥ ಗ್ರಂಥಗಳು ವಸಾಹತುಗಳ ಮುಂದೆ ಹೊರಬರುವಂತಾಯಿತು. 'ಕವಿಚರಿತೆ'ಯಂಥ ದೊಡ್ಡ ಗ್ರಂಥವು ಬರುವಂತಾಯಿತು. ಇದರಿಂದ ಕನ್ನಡಕ್ಕೂ ವಿಸ್ತಾರವಾದ ಹೆಮ್ಮೆ ಪಡಬಹುದಾದ ಸಾಹಿತ್ಯವಿದೆಯೆಂದು ಗೊತ್ತಾಯಿತು. ಹೊಸಗನ್ನಡ ಸಾಹಿತ್ಯದ ವಿವಿಧ ರೂಪಗಳಾದ ಗದ್ಯ, ಚರಿತ್ರೆ, ಜೀವನಚರಿತ್ರೆ, ಪ್ರಬಂಧ, ವಿಮರ್ಶೆ, ನವೀನ ಶೈಲಿಯ ಕಾದಂಬರಿಗಳು, ಹೊಸ ಮನೆ ಮಾತಿನ ಶೈಲಿಯ ಗ್ರಂಥಗಳು, ಶ್ರೀನಿವಾಸರ ಸಣ್ಣಕಥೆಯ ಸುಖಶೈಲಿಯವರೆಗೆ ಬಗೆಬಗೆಯ ಸಾಹಿತ್ಯ ಶೈಲಿಗಳು ಬಂದವು. ನಾನಾ ವಿಧವಾದ ಪ್ರಯೋಜನಗಳುಳ್ಳ ಪತ್ರಿಕೆಗಳ ಕಾರ್ಯವು ಜನ್ಮವೆತ್ತಿ ಬೆಳೆಯಿತು. ಮ॥ ವೆಂಕಟಕೃಷ್ಣಯ್ಯನವರು ಕನ್ನಡ ಮಾಸ ಪತ್ರಿಕೆಗಳಿಗೆ ಮೂಲವಾದ 'ಹಿತಬೋಧಿನಿ'ಯನ್ನು ಹೊರಡಿಸಿದರು.

---

೧. ಶ್ರೀ – ಶ್ರೀ ಕೃಷ್ಣರಾಜ ರಜತ ಮಹೋತ್ಸವ ಪ್ರಾಥ – ಪ್ರ.ಕ. ೧೯೨೭ – ಪ್ರಭವ ಸಂವತ್ಸರ – ೩೧ನೇ (ವಿನಾಯಕನ) ಸಂಚಿಕೆ – ವಸ್ತುಕೋಶ.

ನಾಟಕದಲ್ಲಿ ಬಸವಪ್ಪ ಶಾಸ್ತ್ರಿಗಳ 'ಶಾಕುಂತಲಾ ನಾಟಕ', ಇತರ ಭಾಷೆಗಳಿಂದ ಭಾಷಾಂತರಿಸಿದ ನಾಟಕಗಳು, ಕೈಲಾಸಂರವರ ಆಧುನಿಕ ಶೈಲಿಯ ನಗೆನಾಟಕಗಳೂ ಬಂದಿವೆ. ಗದ್ಯದಲ್ಲಿ ಹೇಗೆ ವೈವಿಧ್ಯ, ಜೀವಕಳೆ, ರಸಿಕತೆ, ಸರಳತೆ, ನವೀನತೆಗಳು ಬಂದವೋ ಪದ್ಯದಲ್ಲೂ ಹಾಗೆಯೇ. ಇನ್ನೂ ಸ್ವಲ್ಪ ಅತಿಶಯವಾಗಿಯೇ ಬಂದವು. ಈ ಎಲ್ಲಾ ಬಗೆಯ ಸಾಹಿತ್ಯಗಳ ಉತ್ತೇಜಕರು ಶ್ರೀಮನ್ಮಹಾರಾಜರು. ಅದರಂತೆ ಪ್ರಬುದ್ಧ ಕರ್ಣಾಟಕದ ಸಂಪಾದಕ ವರ್ಗಕ್ಕೆ ಸೇರಿದ ಮಿತ್ರರೊಬ್ಬರನ್ನು ಅವರು ಬರೆದ ಒಂದು ಗ್ರಂಥಕ್ಕಾಗಿ ಮಹಾರಾಜರು ಸನ್ಮಾನಿಸಿರುವುದನ್ನು ಸಂಪಾದಕರು ಸ್ಮರಿಸಿಕೊಳ್ಳುತ್ತಾರೆ.

ಮಹಾರಾಜರ ಉತ್ತೇಜನವು ಸಾಹಿತ್ಯಕ್ಕೆ ಮಾತ್ರವಲ್ಲದೇ ಲಲಿತಕಲೆ, ವಾಸ್ತುಶಿಲ್ಪ ಸಂಗೀತ ಪ್ರಪಂಚಕ್ಕೂ ಹೇರಳವಾಗಿದೆ. 'ಯಥಾ ರಾಜಾ ತಥಾ ಪ್ರಜಾ' ಎಂಬ ಹೇಳಿಕೆಗಳ ಜೊತೆಗೆ ದೈವಬಲ, ಧರ್ಮಪಾರಾಯಣತೆ, ಸದಾಚಾರ, ಪರಿಶುದ್ಧ ನಡತೆ, ಪಾಪಭೀತಿ ಇವು 'ನಾವಿಷ್ಣು ಪೃಥಿವೀಪತಿ:' ಎಂದು ಬಂಗಾರದ ಅಕ್ಷರದಲ್ಲಿ ಕೆತ್ತಿ ಬರೆದಿವೆ.

'ಇಂತಹ ಪ್ರಭುಗಳನ್ನು ಪಡೆದಿರುವುದು ಪ್ರಜೆಗಳ ಒಂದು ಅಪೂರ್ವ ಪುಣ್ಯ. ರಜತ ಮಹೋತ್ಸವವಾದಂತೆ ಸ್ವರ್ಣಮಹೋತ್ಸವವೂ, ರತ್ನಮಹೋತ್ಸವವೂ ನೆರವೇರುವಂತೆ ಭಗವಂತನು ಅನುಗ್ರಹಿಸಲಿ! ಉತ್ಸವಗಳಲ್ಲಿ ಇನ್ನೂ ಹೆಚ್ಚು ಹೆಚ್ಚು ಉತ್ಸಾಹದಿಂದ ಭರತಖಂಡವೇ ಭಾಗಿಯಾಗುವಂತೆ ದಯಪಾಲಿಸಲಿ!! ಎಂದು ಸಂಪಾದಕರು ಆಶಿಸಿ ಹಾರೈಸಿದ್ದಾರೆ.

ಕನ್ನಡ ಸಾಂಸ್ಕೃತಿಕ ಮನಸ್ಥಿತಿ (Cultural Subconcious)ಯಲ್ಲಿ ದೇಶೀಯ ಪ್ರಭುತ್ವದ ಬಗ್ಗೆ ಇದ್ದ ಗೌರವ ಅಭಿಮಾನಗಳು ವ್ಯಕ್ತವಾಗುತ್ತವೆ. ಇದನ್ನು ಮನಃಶಾಸ್ತ್ರದ ಗ್ರಹಿಕೆಯಲ್ಲಿ 'Compensation Theory' ಎಂದು ಕರೆಯುತ್ತಾರೆ. ಬ್ರಿಟಿಷ್ ಆಳ್ವಿಕೆಯ ಬಗ್ಗೆ ಇದ್ದ ಅಸಮಾಧಾನವನ್ನು ವ್ಯಕ್ತಪಡಿಸುವ ಒಂದು ವಿಧಾನ ದೇಶೀಯ ಪ್ರಭುತ್ವಕ್ಕೆ ಗಾಢವಾದ ನಿಷ್ಠೆಯನ್ನು ತೋರುವುದಾಗಿದೆ.

## ಕನ್ನಡ ಐತಿಹಾಸಿಕ ಕಾದಂಬರಿಗಳು :

ವಸಾಹತುಶಾಹಿಗಳ ಕಾಲದಲ್ಲಿ ಭಾರತ ದೇಶದಲ್ಲಿ ಪ್ರಚಲಿತವಾದ ಇಂಗ್ಲಿಷ್ ವಿದ್ಯಾಭ್ಯಾಸವನ್ನು ಕುರಿತು ಹಲವು ಜನರು ಹಲವು ವಿಧವಾಗಿ ಹೇಳುತ್ತಿದ್ದರು. ಕೆಲವರು ಐಶ್ವರ್ಯ ಭೋಗಲೋಲುಪರಾದ ಇಂಗ್ಲಿಷರ ಅಭಿಪ್ರಾಯಗಳು ಪ್ರಬಲವಾಗಿ, ಧರ್ಮಮೂಲವಾದ ಅನಾದಿಯಾದ ನಮ್ಮ ಆರ್ಯನಾಗರಿಕತೆ ಮುರಿದುಬೀಳುತ್ತಿದೆಯೆನ್ನುತ್ತಿದ್ದರು. ಮತ್ತೆ ಕೆಲವರು ಜನರ ಮೌಢ್ಯಗಳು ಅಜ್ಞಾನಗಳು ತೊಲಗಿ ಜ್ಞಾನಸೂರ್ಯನು ಉದಯಿಸಿ ದೇಶ ಬೆಳಗುವಂತಾಯಿತೆನ್ನುವರು. ಇನ್ನೂ ಕೆಲವರು ನಮ್ಮ ಧೈರ್ಯಶೌರ್ಯಾದಿ ಗುಣಗಳು ಹೋಗಿ ಗುಮಾಸ್ತರ ಕೆಲಸಕ್ಕೆ ಯೋಗ್ಯವಾದಂತಾಗುತ್ತಿದೆ ಎನ್ನುತ್ತಿದ್ದರು.

ಆದರೆ ನಿಷ್ಪಕ್ಷಪಾತ ಸಾಹಿತ್ಯ ದೃಷ್ಟಿಯಿಂದ ನೋಡಿದರೆ ಇಂಗ್ಲಿಷಿನಿಂದ ಉಪಕಾರವಾಗಿದೆ ಎನ್ನುತ್ತಾರೆ ಲೇಖಕರು. The best that has been thought and said in the world ನಮಗ ಇಂಗ್ಲಿಷ್ ಭಾಷೆಯಿಂದ ಗೋಚರವಾದವೆನ್ನುತ್ತಾರೆ ಉಪನ್ಯಾಸಕರೂ, ಪ್ರ.ಕ.ದ ಸಂಪಾದಕರೂ ಆದ ಎ. ಆರ್. ಕೃಷ್ಣಶಾಸ್ತ್ರಿಯವರು.

ಮೊದಲಿಗೆ ಕಾದಂಬರಿ ಎಂದರೆ ಏನು? ಎಂಬ ಪ್ರಶ್ನೆಗೆ ಉತ್ತರವನ್ನು ಪಡೆಯೋಣ. 'ಬರೀ ಕಥೆ ಕಾದಂಬರಿ

ಅಲ್ಲ; ಒಂದು ದೀರ್ಘವಾದ ಕಥೆ ಕೂಡ ಕಾದಂಬರಿ ಅಲ್ಲ... ಕಾದಂಬರಿ ಪ್ರಕಾರದ ಒಳಗೇ ನಿರೂಪಣಾ ಪ್ರಜ್ಞೆ ಮತ್ತು ಸಮಾಜದ ನಡುವೆ ಒಂದು ಮೂಲಭೂತ ಸಾವಯವ ಛಿದ್ರೀಕರಣ ಇರುತ್ತದೆ. ಎಲ್ಲೋ ನಿರೂಪಣಾ ಪ್ರಜ್ಞೆ ಸಮಾಜದ ಸಮಷ್ಟಿ ಸ್ಥಿತಿಯಿಂದ ಸಿಡಿದು ದೂರನಿಂತಿರುತ್ತದೆ. ಜಾನಪದ ಕಥೆಯನ್ನೋ, ಸಾಂಪ್ರದಾಯಿಕ ಕಥನವನ್ನೋ ತೆಗೆದುಕೊಳ್ಳೋಣ. ಅಲ್ಲಿ ನಿರೂಪಣಾ ಪ್ರಜ್ಞೆ ಮತ್ತು ಕಥನ ಪರಿಕರಗಳ ನಡುವೆ ಒಂದು ಬಗೆಯ ಅಖಂಡ ಸಂಬಂಧವಿರುತ್ತದೆ. ನಿರೂಪಣಾ ಪ್ರಜ್ಞೆ ಜಾನಪದ ಮತ್ತಿತರ ಸಾಂಪ್ರದಾಯಿಕ ಕಥನಗಳಲ್ಲಿ ಮೂಲ ತನ್ಮಯಸ್ಥಿತಿ ಇರುತ್ತದೆ. ಆದರೆ ಕಾದಂಬರಿಯ ಹುಟ್ಟು ಎಲ್ಲಿದೆ ಅಂದರೆ, ನಿರೂಪಣಾ ಪ್ರಜ್ಞೆಗೆ ಈ ರೀತಿ ತನ್ಮಯತೆ ಸಾಧ್ಯವಿಲ್ಲದ ಸ್ಥಿತಿಯಲ್ಲಿ. ಸಾಂಪ್ರದಾಯಿಕ ಕಥನದಲ್ಲಿ ಕಥಾಕೃತಿ ಎನ್ನುವುದು ಸೃಷ್ಟಿಯಾಗುವುದೇ ಅಖಂಡತೆಯ ನೆಲೆಯಲ್ಲಿ, ಕಾದಂಬರಿ ರೂಪುಗೊಳ್ಳುವುದೇ ಇದಕ್ಕೆ ವಿರುದ್ಧವಾದ ಸ್ಥಿತಿಯಲ್ಲಿ'[೧] ಎಂದು ಡಿ.ಆರ್. ನಾಗರಾಜ್ ಅಭಿಪ್ರಾಯ ಪಡುತ್ತಾರೆ.

"ಕಾದಂಬರಿ ಎಂದರೆ ಹೆಂಡ, ಮದ್ಯ ಎಂದರ್ಥ. ಅದರ ಕುಡಿತವು ಹೇಗೆ ಮೈಮರೆಸುತ್ತದೆಯೋ ಹಾಗೆಯೇ ಕಾದಂಬರಿಯೂ ಮೈಮರೆಸುವುದರಿಂದ ಈ ಸಾಹಿತ್ಯ ಪ್ರಕಾರಕ್ಕೆ ಈ ಹೆಸರು ಹೊಂದಿಕೆಯಾಗುತ್ತದೆಂದು ಕಾಣುತ್ತದೆ."[೨]

ಕಾದಂಬರಿಯನ್ನು ಆಧುನಿಕ ಸಾಹಿತ್ಯದ ವಿಶೇಷ ಎಂದು ಕರೆಯಬಹುದು. ಕುವೆಂಪುರವರ ಪ್ರಕಾರ ಕಾದಂಬರಿಯು "ಕರತಲ ರಂಗಭೂಮಿ; ಅಂಗೈ ಮೇಲಣ ನಾಟಕಶಾಲೆ".

ಕಾದಂಬರಿ ಎಂಬ ಸಾಹಿತ್ಯ ವಿಶೇಷವನ್ನು ಕನ್ನಡಕ್ಕೆ ತಂದವರು ಮ॥ ವೆಂಕಟಾಚಾರ್ಯರು, ಬಂಕಿಮಚಂದ್ರ ಚಟ್ಟೋಪಾಧ್ಯಾಯ ಮೊದಲಾದವರ ಕಾದಂಬರಿಗಳನ್ನು ಇವರು ಭಾಷಾಂತರ ಮಾಡಿದರು. ಗಳಗನಾಥರು ಹರಿನಾರಾಯಣ ಆಪ್ಟೆಯವರ ಹಲವು ಕಾದಂಬರಿಗಳನ್ನು ಭಾಷಾಂತರ ಮಾಡಿದ್ದಾರೆ. ತಾವೇ ಕೆಲವು ಕಾದಂಬರಿಗಳನ್ನು ಬರೆದಿದ್ದಾರೆ. ಬಂಕಿಮಚಂದ್ರರು ಐತಿಹಾಸಿಕ, ಸಾಮಾಜಿಕ, ಹೀಗೆ ಬಗೆಬಗೆಯ ಕಾದಂಬರಿಗಳನ್ನು 'ಲೋಕರಹಸ್ಯ' ಮುಂತಾದ ವಿಡಂಬನೆಗಳನ್ನು ಬರೆದಿದ್ದಾರೆನ್ನುತ್ತಾರೆ ಉಪನ್ಯಾಸಕರು. ಅವರ ಪ್ರಕಾರ ಆಗ ಕನ್ನಡದಲ್ಲಿದ್ದ ಐತಿಹಾಸಿಕ ಕಾದಂಬರಿಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಎಲ್ಲಾ ಭಾಷಾಂತರಗಳೇ ಎಂದು ಹೇಳುತ್ತಾ ಉಪನ್ಯಾಸಕರಾದ ಎ. ಆರ್. ಕೃಷ್ಣಶಾಸ್ತ್ರಿಯವರು ಕೊಡುವ ಭಾಷಾಂತರಗಳಲ್ಲಿ ಕೆಲವನ್ನು ಮಾತ್ರ ಉದ್ಧರಿಸುತ್ತೇನೆ.

- **ವೆಂಕಟಾಚಾರ್ಯರಿಂದ :** ಅಮೃತಪುಳಿನ, ಆನಂದಮಠ, ರಾಜಸಿಂಹ, ದುರ್ಗೇಶನಂದಿನಿ, ಕೋಹಿನೂರು.
- **ಗಳಗನಾಥರಿಂದ :** ವೈಭವ, ಕ್ಷಾತ್ರತೇಜ, ಧರ್ಮರಹಸ್ಯ, ತಿಲೋತ್ತಮೆ, ಕನ್ನಡಿಗರ ಕರ್ಮಕಥೆ, ಕುಮುದಿನೀ, ಈಶ್ವರೀಸೂತ್ರ ಇತ್ಯಾದಿ.
- **ಗುಡಿಸಾಗರ ಮತ್ತು ಬೇಂದ್ರೆಯವರಿಂದ :** ಅದ್ಭುತಶೌರ್ಯ

ಇವುಗಳಲ್ಲಿ ಆನಂದಮಠವು ಶುದ್ಧ ಬಂಗಾಳೀ ಚರಿತ್ರೆಗೆ ಸಂಬಂಧಿಸಿದ್ದರೆ; ವೈಭವ ಚಂದ್ರಗುಪ್ತ ಚಾಣಕ್ಯ ನವನಂದರ ವಿಚಾರದ್ದು. ಕರ್ಮಕಥೆ, ಕುಮುದಿನಿ ವಿಜಯನಗರ ಚರಿತ್ರೆಯನ್ನು ಕುರಿತದ್ದು.

---

೧. ಡಿ.ಆರ್. ನಾಗರಾಜ್ – ಸಾಹಿತ್ಯ ಕಥನ – ಅಕ್ಷರ ಪ್ರಕಾಶನ – ೨೦೦೬ – ಪು.ಸಂ. ೨೬೭

೨. ತ.ಸು. ಶಾಮರಾಯ – ಕನ್ನಡ ಸಾಹಿತ್ಯ ಪರಿಷತ್ತು – ೨೦೧೦ – ಪು.ಸಂ. ೨೧೬

ಬಂಕಿಮಚಂದ್ರರನ್ನು ಇಂಡಿಯಾ ದೇಶದ 'ಸರ್ ವಾಲ್ಟರ್ ಸ್ಕಾಟ್' ಎಂದು ಹೇಳಬಹುದು. ಸರ್ ವಾಲ್ಟರ್ ಸ್ಕಾಟ್ ಷೇಕ್ಸ್‌ಪಿಯರರ ನಾಟಕಗಳನ್ನು ಆಳವಾಗಿ ಅಭ್ಯಸಿಸಿ, ಆ ಪದ್ಧತಿಯನ್ನೇ ತಮ್ಮ ಕಾದಂಬರಿಗಳಲ್ಲಿ ಅನುಸರಿಸಿರುವಂತೆ ಕಾಣುತ್ತದೆ.

ಬಂಕಿಮಚಂದ್ರರ ಗ್ರಂಥಗಳಲ್ಲಿ ಶೃಂಗಾರ ಮಿಶ್ರವಲ್ಲದ ಶುದ್ಧ ವೀರರಸವನ್ನು ಚಿತ್ರಿಸಿದ ಕಾದಂಬರಿಯೇ ಇಲ್ಲವೆಂದು ಹೇಳಬಹುದು. ಆದರೂ ಅವು ಸುಂದರವಾಗಿವೆ, ಕೆಲವೊಮ್ಮೆ ಹಾಸ್ಯ ರಸವು ಪ್ರವೇಶಿಸಿ ರಸದ ಬಣ್ಣ ಕೆಡಿಸಿಬಿಡುವುದುಂಟು ಎನ್ನುತ್ತಾರೆ ಉಪನ್ಯಾಸಕರು. ಈ ದೋಷವು ಸರ್ ವಾಲ್ಟರ್ ಸ್ಕಾಟ್‌ರವರಲ್ಲೂ ಇದೆಯೆಂದು ಹೇಳುತ್ತಾರೆ. ಒಮ್ಮೆ ರಾಮಕೃಷ್ಣ ಪರಮಹಂಸರನ್ನು ಬಂಕಿಮಚಂದ್ರರು ಭೇಟಿಯಾದಾಗ ಅವರು 'ಜೀವನದ ಉದ್ದೇಶವೇನೆಂದು ನಿಮ್ಮ ಅಭಿಪ್ರಾಯ?' ಎಂದು ಕೇಳಿದರಂತೆ, 'ಉದ್ದೇಶವೇನು! ತಿನ್ನುವುದು, ಕುಡಿಯುವುದು, ಸುಖಪಡುವುದು ಇದು ತಾನೆ!' ಎಂದರಂತೆ ಬಂಕಿಮಚಂದ್ರರು. ಪರಮಹಂಸರು ಸ್ವಲ್ಪ ಬೇಸರ ಪಟ್ಟುಕೊಂಡು 'ನಿಮ್ಮ ನಿಮ್ಮ ಮನಸ್ಸಿನಲ್ಲಿರುವುದನ್ನು ತಾನೇ ನೀವು ಹೇಳೀರಿ! ಮೂಲಂಗಿಯನ್ನು ತಿಂದವನು ತೇಗಿದರೆ ಮೂಲಂಗಿಯ ವಾಸನೆಯೇ ಬರುತ್ತದೆ; ಸೌತೇಕಾಯಿ ತಿಂದವನು ತೇಗಿದರೆ ಸೌತೇಕಾಯಿಯ ವಾಸನೆಯೇ ಬರುತ್ತದೆ' ಎಂದು ಹೇಳಿದರಂತೆ.

ಇಂತಹ ಬಂಕಿಮಚಂದ್ರರು ಶೃಂಗಾರರಸವನ್ನು ಮರೆಯುವುದು ಹೇಗೆ? ಇದರಿಂದ ಅವರ ವೀರರಸಕ್ಕೇನೂ ಕುಂದುಂಟಾಗುವುದಿಲ್ಲವೆನ್ನುತ್ತಾರೆ ಉಪನ್ಯಾಸಕರು. ಆದರೆ ಆಪ್ಟೆಯವರ ಗ್ರಂಥಗಳಲ್ಲಿ ಶೃಂಗಾರ ರಸ ಬರುವುದು ಅಪರೂಪ. ಅವು ಅಚ್ಚ ವೀರರಸದಿಂದ ತುಂಬಿ ನಿರ್ದೋಷವಾದ, ನಿರ್ಮಲವಾದ, ಸಾಣೆಗೆ ಕೊಟ್ಟ ಥಳಥಳನೆ ಹೊಳೆಯುವ ವಜ್ರದಂತಿವೆ. ಆದರೆ ಬಂಕಿಮಚಂದ್ರರಂತೆ ವಿಸ್ತಾರವಾದ ದುರ್ಗ, ಹೊಳೆ, ನಗರ ಮುಂತಾದವುಗಳ ವಿಸ್ತಾರವಾದ ವರ್ಣನೆಗಳು ಹೆಚ್ಚಾಗಿ ಬರುವುದಿಲ್ಲ. ಇವರಿಬ್ಬರ ಕಾದಂಬರಿಗಳನ್ನೋದಿದವರಿಗೆ ವಿವಾಹದ ಅಥವಾ ಗೃಹಸ್ಥಾಶ್ರಮದ ಉದ್ದೇಶವು ಕೇವಲ ವಿಷಯ ಸುಖಾನುಭವದಲ್ಲಿ ಪರಿಣಮಿಸಬಾರದೆಂದೂ ಅದಕ್ಕೆ ಉದಾತ್ತವಾದ ಉದ್ದೇಶಗಳಿರಬೇಕೆಂದೂ, ಅವುಗಳನ್ನು ಈಡೇರಿಸುವುದಕ್ಕೆ ಪತಿ–ಪತ್ನಿಯರಿಬ್ಬರೂ ಪ್ರಯತ್ನ ಪಡಬೇಕೆಂದೂ ಮನಸ್ಸಿಗೆ ಬೋಧನೆಯಾಗುತ್ತದೆ ಎಂದು ಉಪನ್ಯಾಸಕರಾದ ಎ.ಆರ್. ಕೃಷ್ಣಶಾಸ್ತ್ರಿಗಳು ತಿಳಿಸಿದ್ದಾರೆ.

ಇನ್ನು ಕನ್ನಡ ಐತಿಹಾಸಿಕ ಕಾದಂಬರಿಗಳು – ಎರಡನೇ ಭಾಗದಲ್ಲಿ ಬಂಕಿಮಚಂದ್ರ ಹಾಗೂ ಆಪ್ಟೆಯವರು ಇಬ್ಬರಲ್ಲಿಯೂ ಒಂದೇ ವಿಧವಾದ ವೀರರಸವನ್ನು ಚಿತ್ರಿಸುವ ಸಾಮರ್ಥ್ಯ, ಸ್ವದೇಶಾಭಿಮಾನ, ಸ್ವಧರ್ಮಾಭಿಮಾನ ಉತ್ಸಾಹಗಳು ತುಂಬಿವೆಯೆಂದು ಹೇಳುತ್ತಾರೆ. ಇವರ ಕಾದಂಬರಿಗಳ ಭಾಷಾಂತರದ ಬಗ್ಗೆ, ಹೇಳುವುದಾದರೆ ವೆಂಕಟಾಚಾರ್ಯರು ಯಥಾವತ್ತಾಗಿ ತರ್ಜುಮೆ ಮಾಡಿದ್ದಾರೆ. ಒಂದೆರಡು ವಾಕ್ಯ ವ್ಯತ್ಯಾಸವಾಗಬಹುದು. ಆದರೆ ಅಭಿಪ್ರಾಯ ವ್ಯತ್ಯಾಸವಾಗುವುದಿಲ್ಲ. ಆದರೆ ಗಳಗನಾಥರು ಈ ರೀತಿ ಅಕ್ಷರಶ: ತರ್ಜುಮೆ ಮಾಡಿಲ್ಲ. ಕೆಲವು ಕಡೆ ಸಂಕ್ಷೇಪಿಸಿ, ಹೊಸ ಪಾತ್ರಗಳನ್ನು ಸೃಷ್ಟಿಸಿ, ತಾವು ಮೆಚ್ಚುವ ಕೆಲವು ಅಭಿಪ್ರಾಯಗಳನ್ನು ಹೇಗಾದರೂ ಮಾಡಿ ಗ್ರಂಥದಲ್ಲಿ ತಂದಿದ್ದಾರೆಂದು ಉಪನ್ಯಾಸಕರು ಹೇಳಿದ್ದಾರೆ.

ಕಥೆಗಳನ್ನು ಓದುವುದು ಕೆಲವೊಮ್ಮೆ ದೋಷವೆಂದು ಗಣಿಸಲ್ಪಟ್ಟರೂ ಐತಿಹಾಸಿಕವಾದ ಜೀವನ ವಿಮರ್ಶಕವಾದ ಉತ್ತೇಜಕವಾದ, ಧರ್ಮನೀತಿ ಬೋಧಕವಾದ, ದೇಶವಾತ್ಸಲ್ಯ ಪ್ರೇರಕವಾದ ಗ್ರಂಥಗಳಿಗೆ ಎಂದಿಗೂ ಅದು ಅನ್ವಯಿಸಲಾರದು. ಇಂತಹ ಗ್ರಂಥಗಳನ್ನು ನಾಲ್ಕಾರು ಸಾರಿ ಓದಿದರೆ ಮನಸ್ಸಿಗೆ ಉತ್ಸಾಹ ಹಾಗೂ ವೀರಾವೇಶ ಹುಟ್ಟುವುದೆಂದು ಉಪನ್ಯಾಸಕರು ಹೇಳಿದ್ದಾರೆ. "ಏಳಿ, ಎಚ್ಚೆತ್ತುಕೊಳ್ಳಿ, ವೀರರಸಪೂರಿತವಾದ ಈ ಐತಿಹಾಸಿಕ

ಕಾದಂಬರಿಗಳನ್ನು ಓದಿ ವೀರರಸವನ್ನು ಪಾನಮಾಡಿ, ಉತ್ಸಾಹರಹಿತವಾದ ಹೃದಯಗಳಲ್ಲಿ ಜೀವವನ್ನು ತುಂಬಿಕೊಳ್ಳಿ; ಧರ್ಮಬುದ್ಧಿಯನ್ನು ಸಂಚಾರ ಮಾಡಿಕೊಳ್ಳಿ; ಸ್ವದೇಶ ಸ್ವಜನಾನುಭವಗಳನ್ನು ತುಂಬಿಕೊಳ್ಳಿ! ದೇಶದ ಸಾಹಿತ್ಯವನ್ನು ಚರಿತ್ರೆಯನ್ನೂ ಓದಿ; ಇಂಗ್ಲೀಷಿನಲ್ಲಿ ಓದಬಹುದಾದ ಉತ್ತಮೋತ್ತಮ ಸಾಹಿತ್ಯವನ್ನು ಓದಿ; ಮುಂದೆ ನಮಗೂ ಮೈಸೂರು ದೇಶಕ್ಕೂ ಹೇಗೆ ಮಂಗಳವಾಗುವುದೆಂಬುದನ್ನು ವಿಚಾರ ಮಾಡಿ! ಒಕ್ಕಟ್ಟಿರಲಿ! ಒಕ್ಕಟ್ಟಿನಿಂದ, ಬಲದಿಂದ, ಉತ್ಸಾಹದಿಂದ ಒಂದು ಹಿಡಿ ಜನರನ್ನು ಕಟ್ಟಿಕೊಂಡು ಶಿವಾಜಿಯೂ ಎಂಥ ರಾಜ್ಯ ಸ್ಥಾಪನೆ ಮಾಡಿದನೆಂಬುದನ್ನು ಜ್ಞಾಪಕಕ್ಕೆ ತಂದುಕೊಳ್ಳಿ! ಏಳಿ ಎಚ್ಚೆತ್ತುಕೊಳ್ಳಿ!" ಎಂದು ಉಪನ್ಯಾಸಕರು ತಮ್ಮ ಉಪನ್ಯಾಸವನ್ನು ಮುಗಿಸುತ್ತಾರೆ.

ಐತಿಹಾಸಿಕ ಕಾದಂಬರಿಗಳಲ್ಲಿ ಬರುವ ವೀರ-ಧೀರರ ಪಾತ್ರಗಳನ್ನು ಕಂಡು ದೇಶಪ್ರೇಮವನ್ನು ಅರಿತು ಮುಂದಿನ ಯುವಜನಾಂಗವೂ ಅದೇ ರೀತಿ ಬಾಳಬೇಕೆಂಬ ಆಶಯವನ್ನು ಮೇಲಿನ ಉಪನ್ಯಾಸವು ವ್ಯಕ್ತಪಡಿಸಿದೆ.

"ಸಾಹಿತ್ಯದಲ್ಲಿ ತಮ್ಮ ಜೀವನವನ್ನು ಕಾಣುವ ಆಸಕ್ತಿ ಇರುವ ವರ್ಗ ಬೆಳೆದಾಗ ಕಾದಂಬರಿ, ಸಣ್ಣಕಥೆ ಬೆಳೆಯಬಲ್ಲವು. ಇಂತಹ ಸ್ಥಿತಿ ರೂಪಿತವಾದಾಗ ಓದುವವರ ಕುತೂಹಲವನ್ನು ತಣಿಸಿದವರು ಮುಖ್ಯವಾಗಿ ಇಬ್ಬರು - ಬಿ. ವೆಂಕಟಾಚಾರ್ಯರು ಮತ್ತು ವೆಂಕಟೇಶ್ ತಿರಕೋ ಕುಲಕರ್ಣಿ ಗಳಗನಾಥರು'[೩] ಎಂದು ಶೇಷಗಿರಿರಾಯರು ಹೇಳಿದ್ದಾರೆ.

ಓದುಗರ ಕುತೂಹಲವನ್ನು ತಣಿಸಲೆಂದೇ ಬೇರೆ ಭಾಷೆಯ ಕಾದಂಬರಿಗಳನ್ನು ತಾವು ಓದಿ, ಅದನ್ನು ಭಾಷಾಂತರಿಸಿ ಕನ್ನಡಕ್ಕೆ ತಂದ ಅಂತಹ ಹಿರಿಯರ ಪಾತ್ರಗಳು ರಾಷ್ಟ್ರವನ್ನು ಕಟ್ಟುವಲ್ಲಿ ಎಷ್ಟು ಮಹತ್ವವಾದದ್ದು ಎಂಬುದನ್ನು ತಿಳಿಸುವ ಕೆಲಸವನ್ನು ಪ್ರಬುದ್ಧ ಕರ್ಣಾಟಕವೂ, ಅದರ ಸಂಪಾದಕರಾದ ಎ.ಆರ್. ಕೃಷ್ಣಶಾಸ್ತ್ರಿಗಳೂ ಅತ್ಯಂತ ಆಸ್ಥೆಯಿಂದ ಮಾಡಿದರೆಂದು ಹೇಳಬಹುದು. ಇದರಿಂದ ಪ್ರಬುದ್ಧ ಕರ್ಣಾಟಕದ ಓದುಗರ ಚಿಂತನಾಶೈಲಿಯೂ, ದೇಶಪ್ರೇಮವೂ, ಸಾಹಿತ್ಯಾಸಕ್ತಿಯೂ ಚಿಗುರೊಡೆದು ಪ್ರಬುದ್ಧವಾಯಿತೆಂದರೆ ಉತ್ಪ್ರೇಕ್ಷೆಯಾಗಲಾರದು.

ಪ್ರಬುದ್ಧ ಕರ್ಣಾಟಕದ ಸಾಮಾಜಿಕ ಪ್ರಭಾವವನ್ನು ಚಾರಿತ್ರಿಕ ಪ್ರಭಾವದ ದೃಷ್ಟಿಕೋನದಿಂದ ವಿವರಿಸುವುದಾದರೆ Stephen Greenblot ನ ಹೇಳಿಕೆ 'ವಾಸ್ತವವಾಗಿ ಕಾದಂಬರಿ ಪ್ರಕಾರವು ಆಧುನಿಕ ಸಮಾಜವನ್ನು ಸೃಷ್ಟಿಸಿತು'[೪] ಎಂಬುದನ್ನು ಇಲ್ಲಿ ಸಂದರ್ಭೋಚಿತವಾಗಿ ಉದ್ಧರಿಸಬಹುದು.

---

೩. ಪ್ರೊ॥ ಎಲ್.ಎಸ್. ಶೇಷಗಿರಿರಾವ್ - ಸಮಗ್ರ ವಿಮರ್ಶಾ ಸಾಹಿತ್ಯ ಸಂಪುಟ - ೧ ಕನ್ನಡ ಸಂಸ್ಕೃತಿ ಇಲಾಖೆ - ೨೦೧೦ - ಪು.ಸಂ. ೧೩೧

೪. Claire Colebrook – New Literary Histories Manchester University Press – 1997 Page No. 158

## ಕನ್ನಡಿಗರ ಕರ್ತವ್ಯ

ಭುವನೇಶ್ವರೀದೇವಿ ರಥವನೇರಿದಳು
ಕೂಗಿದರು ಎಲ್ಲರೂ ಒಕ್ಕೊರಲ್!
"ತಾಯ್ ಬಿಜಯ ಮಾಡುವಳು, ದಾರಿಬಿಡಿ, ದಾರಿಬಿಡಿ, ಅಡ್ಡ ಬಾರದಿರಿ,
ಭಾರತಾಂಬೆಯ ಹಿರಿಯ ಹೆಣ್‌ಮಗಳ್, ದಾರಿ ತೋರುವ ಹಿರಿಯ ಸೊಡರೆ,
ಬಾಳಮ್ಮ, ಬಾಳು!
ನೀನ್ ಬಾಳೆ, ಏನ್ ಬಾಳು ನಿನ್ನ ಮಕ್ಕಳದು! – ಬಾನ್ ಬಾಳು, ತಾಯೆ –
ಬಾಳಮ್ಮ ಬಾಳು!
ಚೆಲುವೆಯರ, ಚೆನ್ನಿಗರ, ಹಿರಿಯರ ತಾಯ್ ಮಕ್ಕಳಿರ, ಒಡಹುಟ್ಟಿದವರಾ,
ಒಸಗೆ ನುಡಿ ಕೇಳಿದಿರ, ತಾಳಿದಿರ ಎದೆಯಲ್ಲಿ, ತಾಳಿ ಬಾಳುವಿರಾ.
ನಾಡುನುಡಿ ನಡೆಗಳನು ಮುಂದೆ ನಡೆಸುತ್ತ, ಮುಂದೆ ಸಾಗುವಿರಾ?
ಭಾರತದ, ಲೋಕದಾ ಮಕ್ಕಳಲಿ ಹಿರಿದಾಗಿ ತೂಕ ಕೂಗುವಿರಾ?
ಬನ್ನಿ, ಓ ಮಕ್ಕಳಿರ,
ಒಕ್ಕೊರಲೆಲ್ಲರೂ ಕೂಗಿ ಈ ಒಕ್ಕೂಗ – ಈ ಹಿರಿಯ ಕೂಗ –
"ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ, ಬಾಳ್ಗೆ –
ಕನ್ನಡದ ತಾಯ್ ಗೆಲ್ಗೆ, ಬಾಳ್ಗೆ."[*]

'ಕನ್ನಡಿಗರ ಕರ್ತವ್ಯ'ವೇನೆಂದು ಸಿ.ಕೆ. ವೆಂಕಟರಾಮಯ್ಯನವರು 'ಪ್ರಬುದ್ಧ ಕರ್ಣಾಟಕ'ದ ಎರಡು ಸಂಚಿಕೆ[೧]ಗಳಲ್ಲಿ ತಿಳಿಸಿರುವುದು ಅಂದಿಗೂ, ಇಂದಿಗೂ ಪ್ರಸ್ತುತವೆಂದು ಹೇಳಬಹುದು. ರಾಷ್ಟ್ರಕಟ್ಟುವ ಕಾಯಕದಲ್ಲಿ ಭಾಷೆಯನ್ನು ಕಟ್ಟುವ ಕೆಲಸವೂ ಬಹಳ ಮಹತ್ವದ ಪಾತ್ರವನ್ನು ವಹಿಸುತ್ತದೆ. ಎಲ್ಲರೂ ಒಂದೆಂಬ ಭಾವನೆಯನ್ನು, ಸಹೋದರತೆಯನ್ನು ಮೂಡಿಸಲು ಸಹಕಾರಿಯಾಗಿದೆ. 'ಕನ್ನಡದ ತುಂಡಾದ ಭೂಪರಿಸರ ಮತ್ತು ಅಲ್ಲಿನ ಕನ್ನಡಿಗರು ಮೂರು ಮುಖ್ಯವಾದ ಪರಿಕಲ್ಪನೆಗಳ ಮೂಲಕ ತಮ್ಮ ಅನನ್ಯತೆಯನ್ನು ಗುರುತಿಸಿಕೊಳ್ಳಬೇಕಾದ ಜರೂರು ಇತ್ತು. ಅವೇ ಕನ್ನಡ–ಕನ್ನಡಿಗ–ಕರ್ನಾಟಕ'[೨]

---

* ಬಿ.ಎಂ.ಶ್ರೀ. – ಶ್ರೀಸಾಹಿತ್ಯ – ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ – ಮೈ.ವಿ.ವಿ. ೨೦೦೨ – ಪು.ಸಂ. ೧೩೬

೧. ೧೯೧೯ ಸಿದ್ಧಾರ್ಥಿ ಸಂವತ್ಸರ – ೨ನೇ (ವಿನಾಯಕನ) ಸಂಚಿಕೆ, ೧೯೧೯ ಸಿದ್ಧಾರ್ಥಿ ಸಂವತ್ಸರ – ೩ನೇ (ದೀಪಾವಳಿಯ) ಸಂಚಿಕೆ.

೨. ಡಾ॥ ಜಿ.ಆರ್. ಗೋವಿಂದರಾಜು – ಹೊಸತು ವಾಚಿಕೆ – ಸಾಹಿತ್ಯ ಸಂವಾದ – ನವಕರ್ನಾಟಕ ಪ್ರಕಾಶನ ೧೮೨೩ನೇ ಪ್ರಕಟಣೆ – ೨೦೦೫ ಸಂಪಾದಕ ಡಾ॥ ಎಚ್. ಎಸ್. ರಾಘವೇಂದ್ರರಾವ್ – ಪು.ಸಂ. ೧೧

ಹೀಗೆ ಗುರುತಿಸಿಕೊಳ್ಳಬೇಕಾದ ಪರಿಕಲ್ಪನೆಗಳಲ್ಲಿ ಮೊದಲ ಸ್ಥಾನದಲ್ಲಿರುವುದೇ ನಮ್ಮ ನಾಡಭಾಷೆಯಾದ 'ಕನ್ನಡ' ಎರಡನೆಯ ಸ್ಥಾನದಲ್ಲಿರುವುದು 'ಕನ್ನಡಿಗ'. ಕನ್ನಡವನ್ನು ಬಲ್ಲ ಕನ್ನಡಿಗರು ತಮ್ಮ ಭಾಷೆಯನ್ನು ಹೇಗೆ ಅಭಿಮಾನದಿಂದ ಉಳಿಸಿ ಬೆಳೆಸಬೇಕು, ಕನ್ನಡಿಗರಾಗಿ ಅವರ ಕರ್ತವ್ಯವೇನು, ಕನ್ನಡ ಸಾಹಿತ್ಯ ಚಟುವಟಿಕೆಗಳನ್ನು ಭಾಷಾ ಉಳಿವಿಗಾಗಿ ಹೇಗೆ ಸಂಘಟಿಸಬೇಕು ಎಂದು ತಿಳಿಯಬೇಕಾಗುತ್ತದೆ. ಕನ್ನಡಿಗ ತನ್ನ ನಾಡಿನಲ್ಲೇ ತಾನೇ ಪರಕೀಯನಂತೆ ವರ್ತಿಸಿ ವಸಾಹತು ಭಾಷೆಯಾದ ಇಂಗ್ಲಿಷಿಗೆ ಹೆಚ್ಚಿನ ಮಹತ್ವವನ್ನು ಕೊಡುವುದನ್ನು ಕಂಡು ರೋಸಿ ಹೋದ ಸಿ.ಕೆ. ವೆಂಕಟರಾಮಯ್ಯನವರು 'ಕನ್ನಡಿಗರ ಕರ್ತವ್ಯ'ವೇನು ಎಂಬುದನ್ನು ಕರ್ಣಾಟಕ ಸಂಘದ ಉಪನ್ಯಾಸದಲ್ಲಿ ತಿಳಿಸಿರುವುದನ್ನು ಲೇಖನ ರೂಪದಲ್ಲಿ ಕೊಟ್ಟಿದ್ದಾರೆ. ಅನ್ಯಭಾಷೆಯ ಎದುರು ಸ್ವಭಾಷೆಯನ್ನು ಹೇಗೆ ಕಾಣಬೇಕೆಂಬುದನ್ನು ಉಪನ್ಯಾಸಕಾರರು ಇಲ್ಲಿ ತಿಳಿಸಿದ್ದಾರೆ.

ಭಾಷೆಯೇ ಜನಾಂಗದ ಮಣಿ ಕಿರೀಟ; ಧನಿಕರು, ಬಡವರು ಎಂಬ ಭೇದವಿಲ್ಲದೆ ಎಲ್ಲರಿಗೂ ದೊರೆಯಬಹುದಾದ ಅಮೃತಸಾರ. ಭಾಷೆಯೇ ದೇಶದ ಸ್ಥಿತಿಯನ್ನು ತಿಳಿಸುವ ಸೂಚೀಪತ್ರ, ಜನರು ಸುಸಭ್ಯರಾಗಿದ್ದರೆ ಅದನ್ನು ತಟ್ಟನೆ ತಿಳಿಸುವುದು ಭಾಷೆ. ಹಿಂದಿನ ಚರಿತ್ರೆಯನ್ನು ತಿಳಿಸಿ ಇಂದಿನ ಜನರು ಭಗವಂತನನ್ನು ಕುರಿತು ಮೊರೆಹೋಗುವಂತೆ ಮಾಡುವುದೇ ಭಾಷೆ. ನಮ್ಮ ದೇಶಭಾಷೆಯಾದ ಕರ್ಣಾಟಭಾಷೆಯನ್ನು ಉಚ್ಛ್ರಾಯ ಸ್ಥಿತಿಗೆ ತರಬೇಕಾದದ್ದು ಕನ್ನಡಿಗರಾದ ನಮ್ಮೆಲ್ಲರ ಕರ್ತವ್ಯ. ಈ ಕರ್ತವ್ಯವು ಸಾಮಾನ್ಯವಾದುದಲ್ಲ. ಕನ್ನಡಿಗರೆಲ್ಲರೂ ಏಕೀಭವಿಸಿ ನಿಂತು ತಮ್ಮ ಸರ್ವಸಾಹಸವನ್ನು ಪ್ರಯೋಗಿಸಿದ್ದಲ್ಲದೆ ಈ ಕಾರ್ಯವು ಸಂಪೂರ್ಣವಾಗಿ ಸಾಗುವಂತಿಲ್ಲ. ಕನ್ನಡ ಭಾಷೆಯು ಊರ್ಜಿತವಾಗಬೇಕಾದರೆ ಕನ್ನಡಿಗರು ಆಚರಿಸಬೇಕಾದ ಕ್ರಮಗಳಲ್ಲಿ ಒಂದೆರಡನ್ನು ವೆಂಕಟರಾಮಯ್ಯನವರು ಸೂಚಿಸುತ್ತೇವೆನ್ನುತ್ತಾರೆ. ಅದಕ್ಕೆ ಮೊದಲು ಕನ್ನಡ ಭಾಷೆಯ ಆಗಿನ ಸ್ಥಿತಿಯನ್ನು ತಿಳಿಸುತ್ತಾರೆ. ತಮಿಳು, ತೆಲುಗು, ಹಿಂದಿ, ಮರಾಠಿ, ಬಂಗಾಳಿ ಭಾಷಿಕರಿಗೆ ಅವರ ಸ್ವಭಾಷೆಯಲ್ಲಿ ಎಷ್ಟು ಗೌರವ, ಮಮತೆ! ಆದರೆ ಕನ್ನಡಿಗರಿಗೆ ತಮ್ಮ ಮಾತೃಭಾಷೆಯನ್ನು ಬಿಟ್ಟು ಇಂಗ್ಲಿಷಿನ ಮೇಲೆ ವ್ಯಾಮೋಹ. ಭಾಷೆಯ ಜೊತೆಗೆ ಕರ್ಣಾಟ ದೇಶದ ಕಲೆಗಳೂ ಕೆಲವು ಕನ್ನಡಿಗರಿಗೆ ಅಸಹನೀಯ ಎಂದು ಉದಾಹರಣೆ ಸಹಿತ ತಿಳಿಸುತ್ತಾರೆ. ಹಿಂದಿನ ವಿಷಮ ಕಾಲಗಳಲ್ಲಿ ನಮ್ಮ ಪೂರ್ವಿಕರು ನಮ್ಮ ಭಾಷೆಯನ್ನುಳಿಸಲು – ಬೆಳೆಸಲು ಎಷ್ಟು ಕಷ್ಟಪಟ್ಟಿರಬೇಕು! ಅವರು ನಿಜವಾಗಿಯೂ ಪುಣ್ಯಪುರುಷರು. ಭಾಷೆ ಬೆಳೆದರೆ ಸಾಕೆಂದು ರಾಜಾಶ್ರಯ ವಿಲ್ಲದಿದ್ದವರೂ ಭಾಷಾಸೇವೆಯನ್ನು ಮಾಡಿ ತಮ್ಮ ಜೀವನವನ್ನು ಸಫಲಗೊಳಿಸಿಕೊಳ್ಳಬೇಕೆಂದು ಭಾವಿಸಿದ್ದರು. ಕನ್ನಡ ಭಾಷೆಯೂ ಸಂಭಾಷಣೆಗಾಗಲಿ, ಗ್ರಂಥರಚನೆಗಾಗಲಿ, ಪತ್ರವ್ಯವಹಾರಕ್ಕಾಗಲಿ ಅನರ್ಹವೆಂದು ಯೋಚಿಸಬಾರದು. ಕನ್ನಡ ಭಾಷೆಯನ್ನು ಊರ್ಜಿತಗೊಳಿಸಬೇಕೆಂಬ ಹಂಬಲವಿಲ್ಲದಿದ್ದರೆ, ಆಲಸಿಗಳಾದರೆ ಅಂತಹವರನ್ನು ದೇಶ ಹಿತೈಷಿಗಳೆನ್ನಲು ಸಾಧ್ಯವಿಲ್ಲವೆನ್ನುತ್ತಾರೆ.

ಕನ್ನಡದಲ್ಲಿ, ಹೃದಯಂಗಮವಾದ ಕವಿತ್ವವಿಲ್ಲ ಎಂದು ಟೀಕಿಸುವವರಿಗೆ ಬುದ್ಧಿ ಹೇಳುತ್ತಾರೆ. ಇಂಗ್ಲಿಷ್ ಭಾಷೆಯಲ್ಲಿ ನ್ಯೂನತೆಯೇ ಇಲ್ಲವೆಂದು ಹೇಳುವವರಿಗೆ ಉದಾಹರಣೆ ಸಹಿತ ತಿಳಿಹೇಳುತ್ತಾರೆ. ಷೇಕ್ಸ್‌ಪಿಯರ್ ಕವಿಯ ಭಂಡ ಮಾತುಗಳಿಗೆ ಕ್ಷಮೆ. ಕಾಳಿದಾಸನ ಮಾತುಗಳಿಗೆ ಗೊಣಗುಟ್ಟುವಿಕೆ ತಪ್ಪೆಂದು ಹೇಳುತ್ತಾರೆ. ಇಂಗ್ಲಿಷ್ ಕವಿಗಳಲ್ಲಿರುವ ದೋಷಗಳಿಗೆ ಗಮನ ಕೊಡದೆ ಅವರ ಗುಣಗಳನ್ನು ಮಾತ್ರವೇ ಗ್ರಹಿಸುವ ಮಹನೀಯರು ನಮ್ಮ ಕವಿಗಳ ವಿಷಯದಲ್ಲೂ ಹೀಗೇಕೆ ಮಾಡಬಾರದೆಂದು ಉಪನ್ಯಾಸಕರರು ಪ್ರಶ್ನಿಸುತ್ತಾರೆ. ಅಮೋಘ ಚೈತನ್ಯರೂ, ಸ್ವಾರ್ಥ ತ್ಯಾಗಿಗಳೂ ಆಗಿದ್ದ ಮಹಾನುಭಾವರ ಕವಿತ್ವದಲ್ಲಿರುವ ಮಾಧುರ್ಯವು ಕೆಲವರಿಗೆ ತಿಳಿಯದೇ ಹೋದ ಮಾತ್ರಕ್ಕೆ ಕವಿಗಳನ್ನು ದೂರಿ ಫಲವೇನು? ಎಂದು ಹೇಳುವ ಉಪನ್ಯಾಸಕರು ಒಳ್ಳೆಯ ಕಾವ್ಯಗಳು ಅರ್ಥವಾಗದಿದ್ದರೆ ಅದು ಓದುಗರ, ಭಾಷಾ ಅಭಿಮಾನ ಶೂನ್ಯರ ದುರದೃಷ್ಟ. ಅದಕ್ಕೆ ಕವಿಗಳು ಏನೂ ಮಾಡಲಾಗುವುದಿಲ್ಲವೆಂದು ಭಾವಿಸುತ್ತಾರೆ.

ಮುಂದಿನ ಸಂಚಿಕೆಯಲ್ಲಿಯೂ ಈ ಉಪನ್ಯಾಸವು ಮುಂದುವರೆದಿದ್ದು ಮೊದಲಲ್ಲೆ ಕವಿ -

ಬಾಗುತೆ ಬಲಿಯುತೆ ಪೊಳೆದಿನಿ ।
ದಾಗುತೆ ದಳವೇರುತಿಡಿಕಿರಿದು ಪಿಳ್ಗುತೆ ಪ ॥
ಣ್ಣಾಗುತೆ ಕಾಯ್ಗಳ್ ಪೊರಮಡೆ ।
ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ ॥

ಎಂಬ ಪದ್ಯವನ್ನು ಉದಾಹರಣೆಯಾಗಿ ಕೊಟ್ಟು ಫಲಭರಿತವಾದ ಬಾಳೆಯ ಗಿಡದ ಸೊಬಗನ್ನು ಕವಿ ವರ್ಣಿಸಿರುವುದರಲ್ಲಿ ಯಾವುದೇ ಅತಿಶಯೋಕ್ತಿಯಿಲ್ಲವೆಂದು ಹೇಳುವ ಉಪನ್ಯಾಸಕರು ಇದೇ ಬಗೆಯ ಐದಾರು ಉದಾಹರಣೆಗಳನ್ನು ಕೊಡುತ್ತಾ ಸೂಕ್ತ ವರ್ಣನೆಯಿಂದ ಕಾವ್ಯ ಸೌಂದರ್ಯ ಹೆಚ್ಚಿರುವುದನ್ನು, ಶಬ್ದಗಳ ಮಧುರತೆಯನ್ನೂ, ಕಾವ್ಯದ ಮಾಧುರ್ಯವನ್ನೂ 'ಆಹ! ಎಂತಹ ಭಾವಗಳು! ಏನು ಸೊಬಗು!' ಎಂದು ಹೊಗಳುತ್ತಾರೆ. ಇದೇನೂ ಇಂಗ್ಲಿಷ್ ಕವಿಗಳನ್ನನುಸರಿಸಿ ಬರೆದುದಲ್ಲ. ಇಂಗ್ಲೆಂಡಿನಲ್ಲಿ ಸತ್ಕವಿಗಳೇ ಹುಟ್ಟಿಲ್ಲದೇ ಇದ್ದ ೧೧೧೦ಶಿನೇ ಸಂವತ್ಸರದಲ್ಲಿ ಈ ಪದ್ಯವು ರಚಿಸಲ್ಪಟ್ಟಿದೆ ಎಂದು ಹೆಮ್ಮೆಯಿಂದ ಹೇಳುತ್ತಾರೆ. ಇದನ್ನೆಲ್ಲಾ ಚೆನ್ನಾಗೆ ವಿಮರ್ಶೆ ಮಾಡಿ ನೋಡಿದರೆ ನಮ್ಮ ಭಾಷೆಯು ಎಷ್ಟೋ ಉತ್ತಮವಾದುದೆಂದು ತೋರುತ್ತದೆ. ಆದ ಮಾತ್ರಕ್ಕೆ ಇದರಲ್ಲಿ ನ್ಯೂನತೆಗಳಿಲ್ಲವೆಂದು ವೆಂಕಟರಾಮಯ್ಯನವರು ಹೇಳುವುದಿಲ್ಲ. ಗುಣದೋಷಗಳು ಎಲ್ಲಾ ಭಾಷೆಯಲ್ಲಿಯೂ ಇರುತ್ತವೆ. ಎಷ್ಟೇ ದೊಡ್ಡ ಕವಿಯಾದರೂ ಅವನು ಬರೆದುದೆಲ್ಲಾ ನಿಷ್ಕಳಂಕವಾಗಿ ಒಂದೇ ಸಮನಾಗಿರುವುದಿಲ್ಲ. ಬರವಣಿಗೆಯ ಕೆಲವು ಭಾಗಗಳು ಅತ್ಯುತ್ತಮವಾಗಿರುತ್ತವೆ. ಅದರಿಂದ ಅವನ ಸಾಮರ್ಥ್ಯ ವ್ಯಕ್ತವಾಗುತ್ತದೆ. ಉಳಿದ ಭಾಗಗಳು ಅಷ್ಟೊಂದು ಹಿತವಾಗಿರದೇ ಕೆಲವು ನ್ಯೂನತೆಗಳಿಂದ ಕೂಡಿರಬಹುದು. ಅಷ್ಟು ಮಾತ್ರಕ್ಕೆ ಭಾಷೆಯೇ ಕೆಟ್ಟದೆಂದು, ಕವಿಗಳನ್ನು ಕಾಡುಜನರೆಂದು ಭಾವಿಸಬಾರದೆಂದು ಉಪನ್ಯಾಸಕರು ಹೇಳುತ್ತಾರೆ. ನಿಜವಾದ ಭಾಷಾಭಿಮಾನಿಗಳ ಸಂಖ್ಯೆ ಹೆಚ್ಚಬೇಕೆಂಬುದು ತಮ್ಮ ಹಂಬಲವೆಂದು ತಿಳಿಸುತ್ತಾರೆ. ಕರ್ಣಾಟ ದೇಶದ ನಿಧಿ ಸ್ವರೂಪವಾಗಿರುವ ಕನ್ನಡ ಭಾಷೆಯನ್ನು ಊರ್ಜಿತ ಸ್ಥಿತಿಗೆ ತರುವುದಕ್ಕಿಂತಲೂ ಪವಿತ್ರವಾದ ಕಾರ್ಯವಿಲ್ಲವೆಂದು ಹೇಳುತ್ತಾರೆ. ಭಾಷೆಯನ್ನು ಮುಂದೆ ತಂದ ಮಹನೀಯರಾದ ಕವಿಗಳನ್ನು ದೂಷಿಸುವುದು ನ್ಯಾಯವಲ್ಲವೆಂದು ಉಪನ್ಯಾಸಕರು ಹೇಳುತ್ತಾರೆ.

ನಮ್ಮ ದೇಶದಲ್ಲಿ ಇಂಗ್ಲಿಷಿಗಿರುವ ಪ್ರಾಶಸ್ತ್ಯವು ಹಿಂದೆ ಇಂಗ್ಲೆಂಡಿನಲ್ಲಿ 'ಲ್ಯಾಟಿನ್' (Latin) ಭಾಷೆಗಿದ್ದಿತು. ಇಂಗ್ಲಿಷು ಭಾಷೆಯು ಗ್ರಂಥರಚನೆಗಾಗಲಿ, ಪತ್ರ ವ್ಯವಹಾರಕ್ಕಾಗಲೀ ಅನರ್ಹವೆಂದು ಭಾವಿಸುತ್ತಿದ್ದರು. ಭಾಷೆಯುಳಿಯುವುದೇ ಕಷ್ಟಕ್ಕೆ ಬಂದಿತು. ಸ್ವಭಾಷೆಯ ದ್ವೇಷವು ಹೋಗಿ ಗಾಢ ಪ್ರೀತಿ ಹುಟ್ಟಿತು. ಭಾಷಾಭಿವೃದ್ಧಿಗಾಗಿ ಎಲ್ಲರೂ ಉತ್ಸಾಹದಿಂದ ಕೆಲಸ ಮಾಡಿದರು. ಭಾಷೆ ದಿನದಿನಕ್ಕೂ ಬೆಳೆದು ರಮಣೀಯವಾಗಿ ಕಂಗೊಳಿಸತೊಡಗಿತು. ಎಂದು ಕನ್ನಡ ಭಾಷೆ ಹೀಗಾಗುವುದೋ ಅಂದೇ ಕನ್ನಡಮಾತೆಯ ವರ್ಧಂತ್ಯುತ್ಸವ ಎನ್ನುತ್ತಾರೆ ಉಪನ್ಯಾಸಕರು. ಬರುವ ಪುಸ್ತಕಗಳಲ್ಲಿ ನಮ್ಮ ದೇಶದ ಜನರ ಆಚಾರ–ವಿಚಾರ, ವ್ಯವಹಾರಗಳನ್ನು ಚಿತ್ರಿಸುವ ಕೆಲಸವಾಗಬೇಕು. ಲೇಖಕರೆಲ್ಲರೂ ಭಾಷಾ ಸೇವೆಯೇ ಮುಖ್ಯವೆಂದರಿತು ಪ್ರಯತ್ನ ಮಾಡಬೇಕೆನ್ನುತ್ತಾರೆ.

ಈ ರೀತಿ ಭಾಷಾ ಸೇವೆಗೆ ಕೆಲಸ ಮಾಡಿದ ಹಲವು ಮಹಾಪುರುಷರು ನಮ್ಮ ನಾಡಿನಲ್ಲಿ ಆಗಿಹೋಗಿದ್ದಾರೆ. "ಉತ್ತರ ಕರ್ನಾಟಕದಲ್ಲಿ ಕನ್ನಡವು ಮರಾಠಿಯ ಝಳಕ್ಕೆ ಬಾಡಿದ್ದಾಗ ಅದನ್ನು ರಕ್ಷಿಸಲು ಟೊಂಕಕಟ್ಟಿದವರಲ್ಲಿ ಶಾಂತ ಕವಿಗಳು (ಬಾಳಾಚಾರ್ಯ ಸಕ್ಕರಿ) ಮುಖ್ಯರು. ಕನ್ನಡ ಮಾತನಾಡುವವರ ಸಂಖ್ಯೆಯೇ ಹೆಚ್ಚಾಗಿದ್ದ ಪ್ರದೇಶಗಳಲ್ಲಿ

ಮರಾಠಿ ಪ್ರಬಲವಾಗಿದ್ದು ಕನ್ನಡ ಪಾಠ ಹೇಳುವವರೇ ಇಲ್ಲದಿದ್ದಾಗ ಡೆಪ್ಯುಟಿ ಚೆನ್ನಬಸಪ್ಪ, ವೆಂಕಟ ರಂಗೋಕಟ್ಟಿ, ಧೋಂಡೋ ನರಸಿಂಹ ಮುಳಬಾಗಲ ಮತ್ತು ಶಾಂತಕವಿಗಳು ಮಾಡಿದ ನಿಷ್ಠೆಯ ಮತ್ತು ಸಾಹಸದ ಕೆಲಸವನ್ನು ಕನ್ನಡನಾಡು ಕೃತಜ್ಞತೆಯಿಂದ ನೆನೆಯಬೇಕು.

ಏಳು ಸಾಯಣ ಕಟ್ಟು ಗ್ರಂಥವ
ನೇಳು ಪಂಪಾ ಕ್ಷೇತ್ರಕೆ ।
ಗಾಳಿ ಗಂಟುಗಳೋದಿದೇತಕೆ
ಏಳು ಈ ಕ್ಷಣ ಮಾತ್ರಕೆ ॥

ಎಂಬ ಹಾಡನ್ನು ಕನ್ನಡಿಗರಿಗೆ ಕೊಟ್ಟವರು ಶಾಂತಕವಿಗಳು 'ಬೇಡಲು ಕನ್ನಡ ದಾಸಯ್ಯ ಬಂದಿಹ ನೀಡಿರಮ್ಮ ತಡ ಮಾಡದಲೆ' ಎನ್ನುತ್ತ ಮನೆಮನೆಗೆ ಹೋಗಿ ೧೯೧೮ರ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಹಣ ಸಂಗ್ರಹಿಸಿದವರು ಅವರು"[೧] ಎಂದು ಎಲ್.ಎಸ್. ಶೇಷಗಿರಿರಾಯರು ನಾಡು-ನುಡಿಯನ್ನು ಕಟ್ಟಿದವರನ್ನು ನೆನೆಯುತ್ತಾರೆ.

ಇಂತಹ ಕವಿಗಳನ್ನು, ಕನ್ನಡಕ್ಕಾಗಿ ಅತ್ಯುತ್ತಮ ಕೆಲಸ ಮಾಡಿದ ಸಾಹಿತಿಗಳನ್ನು ನಾವು ಕೊಂಡಾಡಿದರೆ ಸಾಲದು. ಅವರು ತೋರಿದ ಮಾರ್ಗದಲ್ಲಿ ಕನ್ನಡಿಗರು ಮುಂದೆ ಸಾಗಬೇಕು, ಗುರಿ ಸೇರಬೇಕು. ಅದಕ್ಕೆ ತಮ್ಮ ಉಪನ್ಯಾಸದಲ್ಲಿ ವೆಂಕಟರಾಮಯ್ಯನವರು ಕನ್ನಡಿಗರೆಲ್ಲ ಔತ್ಸುಕದಿಂದ ಕೆಲಸ ಮಾಡಿದರೆ ಕನ್ನಡವು ಉಚ್ಛ್ರಾಯ ಸ್ಥಿತಿಗೆ ಬಂದೇ ಬರುವುದೆಂದು ಹೇಳುತ್ತಾರೆ. ಸ್ಥಿರಪ್ರಯತ್ನದಿಂದ ಗಿಡವನ್ನು ಬೆಳೆಸಿದಂತೆ ಭಾಷೆಯನ್ನು ಬೆಳೆಸಬೇಕು. ಓದುಗರ ಸಂಖ್ಯೆ ಹೆಚ್ಚಬೇಕು. ಮಾಸ ಪತ್ರಿಕೆ ಹಾಗೂ ವೃತ್ತಾಂತ ಪತ್ರಿಕೆಗಳಲ್ಲಿ ಶುದ್ಧ ಶೈಲಿಯ ಲೇಖನಗಳು ಬರಬೇಕು. ಇನ್ನೂ ಅಚ್ಚಾಗದೇ ಉಳಿದಿರುವ ಗ್ರಂಥಗಳನ್ನು ಜೀರ್ಣೋದ್ಧಾರ ಮಾಡಿಸಿ, ಅಚ್ಚು ಹಾಕಿಸಿ ಪ್ರಕಟಿಸಬೇಕು. ಅನ್ಯದೇಶೀಯರಾದ ರೈಸ್, ಕಿಟ್ಟೆಲ್ ಮೊದಲಾದವರೇ ಕನ್ನಡ ಸಾಹಿತ್ಯ ಕೃಷಿ ಮಾಡಿರುವಾಗ ನಾವು ಸ್ವಭಾಷೆಯ ವಿಷಯದಲ್ಲಿ ಉದಾಸೀನರಾಗುವುದು ಅಪಮಾನಕರ.

ನಾವು ನಮ್ಮ ದೇಶದ ಪ್ರಸಿದ್ಧ ಪುರುಷರ ಜೀವನ ಚರಿತ್ರೆಯನ್ನು ಬರೆಯಬೇಕು. ಭಾರತ ಮಾತೆಯ ಯಶಸ್ವೀ ಪುತ್ರರ ಚರಿತ್ರೆಗಳನ್ನು ಬರೆದು, ಅವರಂತೆಯೇ ನಡೆಯಬೇಕು. ವಿದ್ಯಾರಣ್ಯರಂತಹ ಮಹಾಪುರುಷರ ಮೇಲೆ ಒಂದು ಗ್ರಂಥವೂ ಇಲ್ಲ ಎಂದು ವೆಂಕಟಾರಾಮಯ್ಯನವರು ಬೇಸರಪಡುತ್ತಾರೆ. ಈ ಎಲ್ಲಾ ಕಾರ್ಯಗಳು ಒಬ್ಬರಿಂದಾಗುವುದು ಸಾಧ್ಯವಿಲ್ಲ. ಎಲ್ಲರೂ ಒಗ್ಗಟ್ಟಾಗಿ ನಿಂತು ಸಮಾಜಗಳನ್ನು ಸ್ಥಾಪಿಸಿ ಕೆಲಸಮಾಡಬೇಕು. ಸಮಾಜದ ಕೆಲಸ ಮುಖ್ಯವೆಂದರಿತು ಶ್ರದ್ಧೆಯಿಂದ ಕೆಲಸಮಾಡಬೇಕು. ಭಾಷೆಯನ್ನು ಹೊಗಳಲಾಗದಿದ್ದರೂ ತೆಗಳಬಾರದು.

ಇದಕ್ಕೆಲ್ಲಾ ಮುಖ್ಯಾಧಾರವಾದದ್ದು ಸ್ವದೇಶಾಭಿಮಾನ. ದೇಶದ ಚರಿತ್ರೆಯನ್ನೋದಿ, ಕರ್ಣಾಟಕದ ಮಹಿಮೆಯನ್ನರಿತು, ಉತ್ಸಾಹದಿಂದ ಕಾರ್ಯ ಪ್ರಾರಂಭಿಸಬೇಕು. ಶಿಲ್ಪಕಲೆಗೆ, ಪವಿತ್ರ ಕ್ಷೇತ್ರಗಳಿಗೆ, ವೀರರಿಗೆ, ರಾಜಾಧಿರಾಜರುಗಳಿಗೆ ನೆಲೆಯಾದ ಕರ್ಣಾಟ ರಾಜ್ಯದಲ್ಲಿ, ಭಿಕ್ಷುಕರಾಗಿ ಜನಿಸುವುದೂ ಭಾಗ್ಯವಿಶೇಷವಾಗಿದೆ. ಕನ್ನಡಿಗರೆಲ್ಲರೂ ಉತ್ಸಾಹ ಪೂರ್ಣರಾಗಿ ನಿರ್ವಂಚನೆಯಿಂದ, ಭಾಷಾ ಸೇವೆಗೆ ಟೊಂಕಕಟ್ಟಿ ನಿಲ್ಲಬೇಕು. ಆಗಲೇ ನಾವು ಕನ್ನಡಿಗರು. ಅಲ್ಲದಿದ್ದರೆ

೧. ಪ್ರೊ॥ ಎಲ್.ಎಸ್. ಶೇಷಗಿರಿರಾವ್ - ಸಮಗ್ರ ವಿಮರ್ಶಾ ಸಾಹಿತ್ಯ - ೧ - ಕನ್ನಡ ಸಂಸ್ಕೃತಿ ಇಲಾಖೆ - ೨೦೧೦ ಪು.ಸಂ. ೨೬

ಕೇವಲ ಕನ್ನಡದ ಛಾಯೆಗಳು ಎಂದು ಸಿ.ಕೆ. ವೆಂಕಟರಾಮಯ್ಯನವರು ಹೇಳಿದ್ದಾರೆ.

ಇವರು ಹೇಳಿದಂತಹ ನಾಡು-ನುಡಿ ಏಳಿಗೆಯ ಕೆಲಸವನ್ನು ಆ ಹೊತ್ತಿಗೂ ಈ ಹೊತ್ತಿಗೂ ಹಲವಾರು ಮಹನೀಯರು ಮಾಡುತ್ತಿದ್ದರು – ಮಾಡುತ್ತಿದ್ದಾರೆ. "ಪ್ರತಿಭಾವಂತ ಸಾಹಿತ್ಯ ಶಿಲ್ಪಿಗಾಗಿ ಹೊಸ ಯುಗ ಕಾಯುತ್ತಿತ್ತು. ಕನ್ನಡ ಸಾಹಿತ್ಯಕ್ಕೆ 'ಶ್ರೀ' ಅವರಲ್ಲಿ ಅಂತಹ ಶಿಲ್ಪಿ ದೊರೆತಂತಾಯಿತು"[೨] ಎಂಬುದು ಸತ್ಯವಾದ ಮಾತು. ಸೆಂ.ಸಾ.ಕ.ಸಂ.ದ ಪ್ರಬುದ್ಧ ಕರ್ಣಾಟಕವು ಕನ್ನಡಿಗರಲ್ಲಿ ನಾಡು-ನುಡಿಯ ಜಾಗೃತಿಯನ್ನು ಮೂಡಿಸಲು, ಹೊಸಗನ್ನಡ ಸಾಹಿತ್ಯವು ವಿಕಾಸದ ಹಾದಿಯಲ್ಲಿ ಮುಂದೆ ನಡೆಯಲು, ಹಲವು ಕೆಲಸಗಳನ್ನು ಮಾಡಿತು. ಇಂತಹ ಉಪನ್ಯಾಸಗಳ, ಲೇಖನಗಳ, ಚರ್ಚೆಗಳ ಮೂಲಕ ನಾಡಿನ ನಾಲ್ಕೂ ದಿಕ್ಕುಗಳಲ್ಲಿ ಹೊಸಗನ್ನಡ ವಿಕಾಸದ ಜಾಗೃತಿ ಮೂಡಿಸುವಲ್ಲಿ ಪ್ರಬುದ್ಧ ಕರ್ಣಾಟಕವು ಮಾಡಿದ ಕೆಲಸವು ಶ್ಲಾಘನೀಯವಾಗಿದೆ. ಒಟ್ಟಾರೆಯಾಗಿ,

೧. ಹೊಸದಾಗಿ ರೂಪುಗೊಳ್ಳುತ್ತಿದ್ದ 'ಹಿಂದೂ ರಾಷ್ಟ್ರ'ದಲ್ಲಿನ ಬಹುಮುಖತ್ವವನ್ನು ಪ್ರತಿಪಾದಿಸುವುದರತ್ತ ಪ್ರಬುದ್ಧ ಕರ್ಣಾಟಕದಲ್ಲಿ ರೂಪುಗೊಳ್ಳುತ್ತಿದ್ದ ಸಂಕಥನಗಳು ಆಸಕ್ತಿಯನ್ನು ವಹಿಸುತ್ತವೆ.

೨. ಕನ್ನಡ ಸಾಂಸ್ಕೃತಿಕ ಮನಸ್ಥಿತಿಯಲ್ಲಿ ದೇಶೀಯ ಪ್ರಭುತ್ವದ ಬಗ್ಗೆ ಇದ್ದ ಗೌರವ ಅಭಿಮಾನಗಳು ವ್ಯಕ್ತವಾಗುತ್ತವೆ. ಇದನ್ನು ಮನಃಶಾಸ್ತ್ರದ ಗ್ರಹಿಕೆಯಲ್ಲಿ 'ಕಾಂಪನ್ಸೇಷನ್ ಥಿಯರಿ' ಎಂದು ಕರೆಯುತ್ತಾರೆ.ಬ್ರಿಟಿಷ್ ಆಳ್ವಿಕೆಯ ಬಗ್ಗೆ ಇದ್ದ ಅಸಮಾಧಾನವನ್ನು ವ್ಯಕ್ತಪಡಿಸುವ ಒಂದು ವಿಧಾನ ದೇಶೀಯ ಪ್ರಭುತ್ವಕ್ಕೆ ಗಾಢವಾದ ನಿಷ್ಠೆಯನ್ನು ತೋರುವುದಾಗಿದೆ.

೩. ಆಧುನಿಕೋತ್ತರ ಕಾಲಘಟ್ಟಕ್ಕಿಂತ ಮುಂಚೆ ಬಂದ ಕಾದಂಬರಿಯ ಬಗೆಗಿನ ಸಿದ್ಧಾಂತಗಳೆಲ್ಲವೂ ಕಾದಂಬರಿಯನ್ನು ಆಧುನಿಕ ತಂತ್ರಜಾನ ಮತ್ತು ಆಧುನಿಕ ಸಮಾಜದ ಸೃಷ್ಟಿಎಂದು ತಿಳಿದಿದ್ದವು.ಆದರೆ ಪ್ರಬುದ್ಧ ಕರ್ಣಾಟಕದಲ್ಲಿ ಕಾದಂಬರಿ, ಅನ್ಯಭಾಷೆಯ ಅನುವಾದಿತ ಕಾದಂಬರಿಗಳ ಸೃಷ್ಟಿಯಾಗುತ್ತಿರುವ ಸಂಕಥನಗಳನ್ನು ಗಮನಿಸಿದರೆ ಕಾದಂಬರಿಯೇ ಆಧುನಿಕ ಮನುಷ್ಯ ಮತ್ತು ಆಧುನಿಕ ಸಮಾಜವನ್ನು ಸೃಷ್ಟಿಸುವುದಕ್ಕೆ ಮಾದರಿಯನ್ನು ಕಟ್ಟುತ್ತಿತ್ತೆಂದು ಹೇಳಬಹುದು.

೪. ಕನ್ನಡ ಭಾಷೆಯನ್ನು ಕಟ್ಟುವ ಕೆಲಸದಲ್ಲಿಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ಣಾಟಕವು ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತಿತ್ತು.

---

೧. ಪ್ರೊ । ಎಲ್.ಎಸ್. ಶೇಷಗಿರಿರಾವ್ – ಸಮಗ್ರ ವಿಮರ್ಶಾ ಸಾಹಿತ್ಯ – ೧ – ಕನ್ನಡ ಸಂಸ್ಕೃತಿ ಇಲಾಖೆ – ೨೦೧೦ – ಪು.ಸಂ. ೩೩, ೩೪

# ೪. ಸಾಮಾಜಿಕ ಬದಲಾವಣೆಗೆ ಪ್ರಬುದ್ಧ ಕರ್ನಾಟಕದ ಪ್ರತಿಕ್ರಿಯೆ

ವಸಾಹತುಶಾಹಿಯ ಪ್ರಭಾವ, ಪರಿಣಾಮದಿಂದ ಭಾರತೀಯ ಸಮಾಜವು ಹಲವು ಬದಲಾವಣೆಗೆ ತೆರೆದುಕೊಂಡಿತು. ಪಾಶ್ಚಾತ್ಯ ಶಿಕ್ಷಣ ಭಾರತೀಯರಲ್ಲಿ ಹೊಸ ಸಮಾಜ ನಿರ್ಮಾಣಕ್ಕೆ ಪ್ರೇರಕವಾಯಿತು. ಆಂಗ್ಲ ಶಿಕ್ಷಣದಿಂದ ಬಂದ ಪಾಶ್ಚಿಮಾತ್ಯ ಚಿಂತನೆಯಿಂದ ಅನೇಕರು ಹಳೆಯ ಗೊಡ್ಡು ಸಂಪ್ರದಾಯಗಳನ್ನು ವಿರೋಧಿಸಿದರು. ಬ್ರಾಹ್ಮಣ ಶ್ರೇಷ್ಠ, ಶೂದ್ರ ಕನಿಷ್ಠ ಎಂಬ ಭಾವನೆ, ಪುರೋಹಿತಶಾಹಿ, ಧರ್ಮ ಚಾತುರ್ವರ್ಣ (ಜಾತಿ) ಪದ್ಧತಿ, ಊಳಿಗ ಮಾನ್ಯ ವ್ಯವಸ್ಥೆ, ದೇವಸ್ಥಾನ, ಮಠ-ಮಾನ್ಯಗಳು, ವೈದಿಕ-ಅವೈದಿಕ ಈ ಎಲ್ಲ ವ್ಯವಸ್ಥೆಯೂ ಬದಲಾವಣೆಗೊಳಗಾಯಿತು. ಸಮಾಜ ಸುಧಾರಕ ತತ್ವಗಳು ಜನಮನದಲ್ಲಿ ಹೊಸ ಸಾಮಾಜಿಕ ಬದಲಾವಣೆಗಳನ್ನು ಸ್ವಲ್ಪ ಮಟ್ಟಿಗಾದರೂ ಬದಲಾಯಿಸಿದವು. ಸತಿ ಸಹಗಮನ, ಅಸ್ಪೃಶ್ಯತೆ, ಬಾಲ್ಯ ವಿವಾಹ, ಶಿಶುವಿವಾಹ, ಜೀತಪದ್ಧತಿ ವಿರೋಧಿ ಚಳವಳಿಗಳು ನಡೆದವು. ವಿಧವಾವಿವಾಹವನ್ನು ಸಮಾಜ ಸುಧಾರಕರು ಪ್ರೋತ್ಸಾಹಿಸಿದರು. ಈ ರೀತಿಯ ಉದಾರವಾದ ಮತ್ತು ಮಾನವತವಾವಾದ ಮೌಲ್ಯಗಳು ಭಾರತದ ಪ್ರಾಚೀನವಾದವೆಂದು ಸ್ವಾಮಿ ದಯಾನಂದ ಸರಸ್ವತಿಯವರು "Go Back to Vedas" ಎಂಬ ಸಂದೇಶವನ್ನೇ ನೀಡಿದರು. ಏಕೆಂದರೆ ವೇದಗಳಕಾಲದ ಸ್ತ್ರೀ-ಪುರುಷನಿಗೆ ಸಮಾನವಾಗಿದ್ದು, ಹೀನ ಜಾತಿ ಪದ್ಧತಿಗೆ ಅಲ್ಲಿ ಅವಕಾಶವಿರಲಿಲ್ಲ. ವೇದ ಪದದ ಅರ್ಥವೇ ಜ್ಞಾನ.

ಸ್ವಾತಂತ್ರ್ಯಪೂರ್ವದಲ್ಲಿ ಸಾಮಾಜಿಕ ಬದಲಾವಣೆಯ ಕಾಲದಲ್ಲಿ ರಾಮಕೃಷ್ಣ ಪರಮಹಂಸರ ಶಿಷ್ಯರಾದ, ಸ್ವಾಮಿ ವಿವೇಕಾನಂದರು ಯುವಕರಿಗೆ "ಬಲಿಷ್ಠರಾಗಿ, ಕಬ್ಬಿಣದ ಮಾಂಸಖಂಡ, ಉಕ್ಕಿನ ನರಮಂಡಲ, ವಿದ್ಯುತ್ತಿನ ಇಚ್ಛಾಶಕ್ತಿಯ ಬಲ ಇವುಗಳನ್ನು ಬೆಳೆಸಿಕೊಂಡು ನಿಮ್ಮ ಕಾಲ ಮೇಲೆ ನಿಲ್ಲಿ" ಎಂದು ಸಾರಿ ಹೇಳಿದರು. ಮಹಾತ್ಮ ಗಾಂಧೀಜಿಯವರ ಹೋರಾಟವು ಮುಖ್ಯವಾದ ಎರಡು ಅಂಶಗಳಿಂದ ಕೂಡಿತ್ತು.

೧. ವಸಾಹತುಶಾಹಿಯ ವಿರುದ್ಧದ ಹೋರಾಟ. ಸತ್ಯ, ಶಾಂತಿ, ಅಹಿಂಸೆಯೇ ಅದರ ಅಸ್ತ್ರಗಳು.

೨. ದೇಶಿಯ ಆಂತರಿಕದ ಬಿಕ್ಕಟ್ಟು ಜಾತೀಯತೆ, ಅಸ್ಪೃಶ್ಯತೆ, ಮೇಲು-ಕೀಳುಗಳ ವಿರುದ್ಧ ಹೋರಾಟ. ದೇಶ-ಭಾಷೆ-ಸಂಸ್ಕೃತಿಯ ಹೋರಾಟದಲ್ಲಿ ಆಂತರಿಕದ ಬಿಕ್ಕಟ್ಟಿರಬಾರದು. ಹಾಗೆಂದೇ ಗಾಂಧೀಜಿ ಇವನ್ನೆಲ್ಲ ತೊಡೆಯಲು ಯತ್ನಿಸಿದರು. ಅವರೇ ಒಂದು ಕಡೆ ಹೇಳುವಂತೆ "British imperialism is as bad as the social imperialism of caste-Hindus. The political subjugation of Indians is no less an evil than the evil of social subjugation of Harijans".[೧] ಗಾಂಧೀಜಿಯವರ ಸಾಮಾಜಿಕ, ರಾಜಕೀಯ ಚಿಂತನೆಗಳನ್ನು ಮೆಚ್ಚಿದ ಭಾರತೀಯರು ಬಡವ-ಬಲ್ಲಿದ, ಹೆಣ್ಣು-ಗಂಡು, ಮೇಲು-ಕೀಳು, ಹಿಂದೂ-ಕ್ರೈಸ್ತ, ಮುಸಲ್ಮಾನ, ಎಂಬ ಬೇಧವಿರದ ಗಾಂಧೀಜಿಯವರ ಹೋರಾಟದಲ್ಲಿ ಒಂದಾಗಿ ಸಾಗಿದರು. ವಸಾಹತುಶಾಹಿಗೆ ಸಿಂಹಸ್ವಪ್ನವಾದರು.

---

೧. Between Tradition and modernity edited by Fred Bolmyer and G.N. Devy – Sage Publications, New Delhi 1998 – Page No. 11-12

'ಒಂದು ವರ್ಗದ ಪ್ರಾಬಲ್ಯವನ್ನು ಮುರಿದು ಹೊಸ ಆಳುವ ವರ್ಗ ಉಚ್ಛ್ರಾಯಕ್ಕೆ ಬರುವಾಗ, ಹಳೆಯ ಸಾಮಾಜಿಕ ವ್ಯವಸ್ಥೆಯಲ್ಲಿ ನಿರ್ಣಾಯಕ ಬದಲಾವಣೆಗಳನ್ನು ಉಂಟುಮಾಡುತ್ತದೆ ಎನ್ನುವುದು ನಿಜ'[೨] ಎನ್ನುವುದು ಗ್ರಾಮ್ಷಿಯ ಪ್ರಸಿದ್ಧ ಚಿಂತನೆಯಾಗಿದೆ.

ಈ ರೀತಿ ದೇಶೀಯ ಆಳ್ವಿಕೆಯನ್ನು ಮುರಿದು ವಸಾಹತುಶಾಹಿ ಆಳ್ವಿಕೆ ಬಂದಾಗ ಭಾರತೀಯ ಸಮಾಜದಲ್ಲಿ ಅನೇಕ ಬದಲಾವಣೆಗಳಾದವು. "ಯಾಜಮಾನ್ಯ ವರ್ಗವು ಕೆಲವು ವೇಳೆ ತುಂಬಾ ಸೂಕ್ಷ್ಮವಾದ ಪ್ರಭಾವಗಳ ಬಳಕೆಯಿಂದ ಮತ್ತು ಕೆಲವು ವೇಳೆ ಅಪ್ರಜ್ಞಾಪೂರ್ವಕ ನೆಲೆಯ ಪ್ರೇರಣೆಯಿಂದ ಜನಾಭಿಪ್ರಾಯವನ್ನು ರೂಪಿಸುತ್ತಿರುತ್ತದೆ. ಇದನ್ನು ಸಾಧಿಸಲು ಇದು ಕೆಲವು ವೇಳೆ ಭಾಷೆಯನ್ನು ಹತಾರವಾಗಿ ಬಳಸಿಕೊಳ್ಳುತ್ತಿರುತ್ತದೆ. ಈ ಭಾಷಿಕ ಹತಾರದ ಮೂಲಕ ಬರೆಯಲ್ಪಡುವ ಸಾಹಿತ್ಯ ಮತ್ತು ಇತಿಹಾಸಗಳು ಸಾಮಾಜಿಕ ವ್ಯವಸ್ಥೆಗಳ ಮತ್ತು ಸಂಸ್ಥೆಗಳ ನಿರ್ಮಾಣದಲ್ಲಿ ಮಹತ್ವದ ಪಾತ್ರ ವಹಿಸುತ್ತವೆ"[೩] ಎಂದು ಡಾ. ಟಿ. ವೆಂಕಟೇಶ ಮೂರ್ತಿಯವರು ಹೇಳಿದ್ದಾರೆ.

ಬಡವ–ಬಲ್ಲಿದ, ಶ್ರೀಮಂತ–ಬಡವ, ಉಳ್ಳವರು–ಇಲ್ಲದವರು, ಜಮೀನುದಾರ–ಜೀತದಾಳು ಮುಂತಾದ ಭೇದಗಳು ನಮ್ಮ ಭಾರತೀಯ ಸಮಾಜ ಮಾತ್ರವೇ ಅಲ್ಲದೇ ಪ್ರಪಂಚದ ಎಲ್ಲ ಸಮಾಜ ದೇಶದ ಸಮಾಜಗಳಲ್ಲಿ ಕಂಡು ಬರುತ್ತಿದ್ದ ಭೇದಗಳಾಗಿದ್ದವು, ಆಗಿವೆ. ಸಾಹಿತಿಗಳು, ಕವಿಗಳು, ಲೇಖಕರು ಈ ಅಂತರವನ್ನೂ, ವ್ಯತ್ಯಾಸವನ್ನೂ ಕಂಡು ನೊಂದು ಅದನ್ನು ವಿರೋಧಿಸಿ ಸಾಹಿತ್ಯ ರಚನೆ ಮಾಡಿದ್ದಾರೆ.

ಕೆ.ವಿ. ಪುಟ್ಟಪ್ಪನವರು (ಕುವೆಂಪು ಅವರು ಆಗ ಇನ್ನೂ ಆ ಕಾವ್ಯನಾಮದಿಂದ ಕವಿತೆ ರಚಿಸುತ್ತಿರಲಿಲ್ಲ.) ರಚಿಸಿರುವ 'ಕಲ್ಕಿ'[೪] ಕವನವು ಮೇಲಿನ ಅಂಶಗಳನ್ನು ಹೊಂದಿರುವ ಒಂದು ಕವಿತೆ.

ನಿದ್ದೆಯ ಲೋಕದಲ್ಲಿನ ಕನಸಿನ ಬೀದಿಯಲ್ಲಿ ನಡೆಯುತ್ತಿದ್ದ ಕವಿ ಹಾದಿತಪ್ಪಿ ಅನಂತ ವಿಸ್ತೀರ್ಣದ ಒಂದು ವನವನ್ನು ಹೊಕ್ಕುಬಿಡುತ್ತಾರೆ. ಹೆಮ್ಮರಗಳು, ಮುಳ್ಳಿನ ಪೊದೆಗಳು, ಗರಗಸವಳ್ಳಿ, ಪ್ರೇತದಂತಹ ಪಾಪಾಸಿನ ಕಳ್ಳಿಗಳಿಂದ ಆ ವನ ತುಂಬಿರುತ್ತದೆ. (ಇವು ಸಮಾಜದ ವಿವಿಧ ದುಷ್ಟ ಶಕ್ತಿಗಳ ಪ್ರತೀಕದಂತಿವೆ.) ಆ ಹೆಗ್ಗಾಡಿನಲ್ಲಿ ಬೆಳಕೆಂಬುದೇ ಇಲ್ಲದೇ ಕತ್ತಲು ಮಯವಾಗಿತ್ತು. 'ಬೆಳಕೋ ಕತ್ತಲೋ ಶಿವನೇ ಬಲ್ಲ!' ಎನ್ನುತ್ತಾರೆ ಕವಿ. ಕತ್ತಲು ಅಜ್ಞಾನದ ಸಂಕೇತವಾಗಿದ್ದು ಅದು ಭೀತಿಯ ಪ್ರತೀಕವಾಗಿದೆ. ಎದೆಗೆಡದೆ ನಡೆದೂ ನಡೆದೂ ಕವಿ ಸ್ಮಶಾನ ಮೌನವನ್ನು ದಾಟಿ ನೋಡಿದರೆ ಮುಂದುಗಡೆ ಬೆಟ್ಟ, ಅದರ ಶಿಖರ ಮುಗಿಲಿನ ಮುಟ್ಟು! ಕಡೆಗೂ ಕವಿ ಬೆಟ್ಟದ ನಡುನೆತ್ತಿಯನ್ನು ಹತ್ತಿ ನೋಡಿದಾಗ ಅಲ್ಲಿ ಬಂದು ಮಾಯದ ಊರು ಕಾಣಿಸುತ್ತದೆ.

ಆ ಊರಿನಲ್ಲಿ ಧನಿಕರ ಮನೆಗಳು ಒಂದೆಡೆ ನಿಂತಿದ್ದರೆ, ಬಡವರ ಮನೆಗಳೇ ಒಂದೆಡೆ ನಿಂತಿದ್ದವು. ಧನಿಕರ

---

೨. ಶತಮಾನ ಚಿಂತನೆ – ೧ . ಅಂಟೋನಿಯೋ ಗ್ರಾಮ್ಷಿ – ಗ್ರಾಮ್ಷಿಯ ಚಿಂತನೆಗಳು ಪುಟ ಸಂ. ೮೨.

೩. ಕನ್ನಡ ನಾಟಕ : ಯಜಮಾನ್ಯ ಸಂಕಥನ, ಡಾ॥ ಟಿ. ವೆಂಕಟೇಶಮೂರ್ತಿ, ಅಧ್ಯಯನ ಮಂಡಲ, ಬೆಂಗಳೂರು ೨೦೦೯ ಪು.ಸಂ. ೨೯.

೪. ಕುವೆಂಪು – ಕಲ್ಕಿ – ಪ್ರಕ. ೧೯೩೧ – ಪ್ರಮೋದೂತ ಸಂವತ್ಸರ – ೪೬ನೇ (ಕಾಮನ) ಸಂಚಿಕೆ – ಸಂಪುಟ ೧೨ – ಸಂಚಿಕೆ ೪.

ಮನೆಯಲ್ಲಿ ಜ್ಯೋತಿಯ ಮಣಿದೀಪಗಳಿದ್ದರೆ, ಬಡವರ ಗುಡಿಸಲಲ್ಲಿ ಕಗ್ಗತ್ತಲು ತುಂಬಿತ್ತು.

ಹಾಡಿನ ನುಣ್ದನಿಯತ್ತ
ಗೋಳಿನ ನೀಳ್ದನಿಯಿತ್ತ
ಕೂಳನು ಹೆಮ್ಮೆಗೆ ಬಿಸುಡುವರಲ್ಲಿ,
ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ!
ಆ ಕಡೆ ಉದ್ಯಾನ,
ಈ ಕಡೆ ಸ್ಮಶಾನ!

ಎಂದು ಕವಿ ತಾವು ಕಂಡ ದೃಶ್ಯವನ್ನು ವಿವರಿಸುತ್ತಾರೆ. ಆ ವ್ಯತ್ಯಾಸವೇ ಸಮಾಜದ ವರ್ಗ ತಾರತಮ್ಯವನ್ನು ಕಣ್ಣಿಗೆ ಕಾಣುವಂತೆ ಚಿತ್ರಿಸಿದೆ. ಪಿತಾಂಬರಗಳನ್ನು ಹೊದಿಯುವರಿರುವ ಊರಿನಲ್ಲೇ ಕೌಪೀನಕ್ಕೆ ಚಿಂದಿಯೂ ಸಿಗದವರಿದ್ದಾರೆಂಬುದು ಎಂತಹ ವಿಪರ್ಯಾಸ!

ಹಾಗೇ ನೋಡುತ್ತಿದ್ದ ಕವಿ ಬೆಚ್ಚಿಬೀಳುತ್ತಾರೆ. ಕಾರಣ ಬಡವರ ಒಡಲಿನ ಜಠರಾಗ್ನಿಯೂ ಎದ್ದು ಅದರಿಂದ ಗುಡಿಸಲುಗಳಿಗೇ ಬೆಂಕಿಯು ಬಿದ್ದು ಧಗಧಗನೆ ಹೊತ್ತಿ ಉರಿದು ಭುಗಿಲ್ಲೆನ್ನುತ್ತ ಆಕಾಶದವರೆಗೂ, ದಿಕ್ಕುದಿಕ್ಕುಗಳ ಕೊನೆಯವರೆಗೂ ಹಬ್ಬಿ ತನ್ನ ನಾಲಗೆ ಚಾಚಿ ಶ್ರೀಮಂತರನ್ನೇ ಬಾಚಿ ಅಪ್ಪಿಕೊಳ್ಳುತ್ತದೆ. ಹೀಗೆ ಹೇಳುವಾಗ ಕವಿ ಕುವೆಂಪು

'ಬಡವರ ಸಿಟ್ಟಿದು ಏನು ಪಿಶಾಚಿ
ಬಡಬಾಗ್ನಿಯೆ ತಲೆತಗ್ಗಿತು ನಾಚಿ'

ಎನ್ನುತ್ತಾರೆ. ಅಂದರೆ ಬಡವರ ಸಿಟ್ಟು ಬಡಬಾಗ್ನಿಗಿಂತಲೂ ಮಿಗಿಲಾದದ್ದು. ಅದು ಶ್ರೀಮಂತರ ಸೌಧಗಳ ನೆತ್ತಿಯನ್ನೇ ಸೀದು ಹೋಗುವಂತೆ ಮಾಡುತ್ತದೆ. ಹೀಗೆ ಮಾಡಿದ್ದು ಬಡ ಹೊಟ್ಟೆಯಲ್ಲಿ ಹೊತ್ತಿದ ಉರಿ! – ಇದೂ ಕೂಡ ಒಂದು ಮಾನವತಾವಾದದ ಒಂದು ಉದಾರವಾದದ ಪ್ರತಿಬಿಂಬವೇ ಆಗಿದೆ.

ಮುಗಿಲನ್ನು ಮುಟ್ಟುವಂತಿದ್ದ ಬೆಟ್ಟದ ಶಿಖರದ ಮೇಲೆ ನಿಂತಿದ್ದ ಕವಿಗೂ ಆ ಬೆಂಕಿಯ ಜ್ವಾಲೆ ತಟ್ಟುತ್ತದೆ, ಹಾಹಾಕಾರವೂ ಕೇಳುತ್ತದೆ. ಆ ಜ್ವಾಲೆಯಲ್ಲಿ ಜಠರಾಗ್ನಿಯಲ್ಲಿ ಮಕ್ಕಳು ಮರಿಗಳ ಚೀತ್ಕಾರದೊಂದಿಗೆ ಗರ್ಭಿಣಿಯರು, ಬಾಣಂತಿಯರು, ನವವಧುಗಳು, ಶ್ರೀಮಂತರು, ಹುಡುಗರು, ಮುದುಕರು, ಕುಂಟರು, ಕಿವುಡರು, ಲಂಪಟ ಸನ್ಯಾಸಿಗಳು, ಗುರುಗಳು, ಶಿಷ್ಯರು, ಮನೆಗಳು, ಮಠಗಳು ಎಲ್ಲವೂ ಬೆಂದು ಹೋಗುತ್ತವೆ. ಬಡವನ ಜಠರಾಗ್ನಿಯೆ ಬಡಬಾಗ್ನಿಯಾಗಿದೆ!' ಬಡವನೆ ಕಲಿಯುಗದಂತ್ಯದ ಕಲ್ಕಿ!' ಎನ್ನುತ್ತಾರೆ ಕವಿ ಕುವೆಂಪು.

ಆ ದೃಶ್ಯ ಕಣ್ಮರೆಯಾದ ನಂತರ ಕಂಡ ದೃಶ್ಯದಲ್ಲಿ ರಕ್ತದ ಜಲಪಾತ! ನರಮಾಂಸದ ನಾತ! ಗಗನ ಭೂಮಿಗಳೆಲ್ಲ ರಕ್ತಮಯವಾಗಿದ್ದು ನರರ ಆರ್ತಧ್ವನಿಯು ಹೊರಹೊಮ್ಮುತ್ತಿತ್ತು. ನರರ ರುಂಡಗಳು, ಮುಂಡಗಳು ಆಲಿಯ ಕಲ್ಲುಗಳುರುಳುವಂತೆ ಧುಮುಕುತ್ತಿದ್ದವು. ಪಾಪ – ಪುಣ್ಯದ ದೇಹಗಳು, ಗುಡಿಗೋಪುರಗಳು, ಧರ್ಮದ ಗೇಹಗಳೆಲ್ಲವೂ

ಕಸಕಡ್ಡಿಯಂತೆ ನುಗ್ಗಿ ತೇಲುತ್ತಿದ್ದವು.

ಕವಿ ಹಾಗೇ ನೋಡಿದರೆ ದೂರದಲ್ಲಿ ಕ್ರೌರ್ಯದಿಂದ ಅಸ್ಥಿಪಂಜರವನ್ನೇರಿ, ಬೆಳ್ಳನೆ ಚಿಲಿಯುವ ದಾಡೆಯನ್ನು ತೋರಿ, ಅಸ್ಥಿಪಂಜರ ಪ್ರೇತಸ್ವರೂಪಿ ಧಾವಿಸಿ ಬರುತ್ತಿದ್ದನು. ಅವನ ಬಲಗೈಯಲ್ಲಿ ಮಿಂಚಿನ ಕತ್ತಿ, ಎಡಗೈಯಲ್ಲಿ ಸಿಡಿಲಿನ ಬುತ್ತಿಯಿದ್ದು ಅವನದ್ದು ಎಲುಬಿನ ಕುದುರೆ! ಎಲುಬಿನ ಆಳು! 'ಇವನೆಯೇ ಕಲ್ಕಿ?' ಎಂದು ಕವಿ ಭಯಾಶ್ಚರ್ಯಭರಿತರಾಗುತ್ತಾರೆ. ಅಂತಹ ಸಮಯದಲ್ಲೂ ಬಡವರ ಬಾಳು? ಗೋಳು? ಎಂದು ಚಿಂತಿಸುತ್ತಾರೆ. ಹೀಗೆ ಬಂದ ಅವನು "ಹಸಿವೇ! ದಾಹಾ!" "ರಕ್ತಾ ! ರಕ್ತಾ! ರಕ್ತಾ!" ಎಂದು ನೆತ್ತರು ಹೊಳೆಯಲ್ಲಿ ಕುದುರೆಯೊಡನೆ ಧುಮುಕುತ್ತಾನೆ. ರಕ್ತವನ್ನು ಮೊಗೆಮೊಗೆದು ಕುಡಿದ ಅವನು ತಲೆಗಳನ್ನು ತೆಗೆತೆಗೆದು ತಿನ್ನುತ್ತಾನೆ. ಎಲುಬಿನ ಕುದುರೆಯ ಕೆನೆಯುವ ಸದ್ದು ಬ್ರಹ್ಮಾಂಡವೇ ಬಿರಿಯುವಂತಿತ್ತು. ಎಲುಬಿನ ಮೂರುತಿ ಗಹಗಹಿಸುತ್ತಿದ್ದರೆ ಗುಡುಗಿನ ಮಾಲೆಯೇ ಹೊರಹೊಮ್ಮುವಂತಿತ್ತು. ಕುದುರೆಯೂ, ಆಳೂ ರಕ್ತವನ್ನು ಕುಡಿದು, ಶವಗಳನ್ನು ಲರಿಲರಿ ಕಡಿದು ತಿಂದರು. ಹೆಣಗಳು ಮುಗಿದರೂ ಅವರ ಹಸಿವು ನೀಗಲಿಲ್ಲ. ಬಡವರ ಗಂಟಲ ಬೇಗೆ, ಬಡವರ ಹೊಟ್ಟೆಯ ಬೆಂಕಿಯ ಹಸಿವೆ! ಆದರೆ ತುಂಬದು, ತುಂಬದೋ ಹೊಟ್ಟೆ! ಕೆಟ್ಟೆ, ಕೆಟ್ಟೇ ಎಂದು ಕವಿ ಹೇಳುವಷ್ಟರಲ್ಲಿ ಕಲ್ಕಿ ಅವರನ್ನು ಬೆಟ್ಟದ ಮೇಲೆ ನೋಡಿ ಬರುತ್ತಾನೆ. ಆಗ ಕವಿ ಒಲ್ಲೇ! ಒಲ್ಲೇ! ಎಂದು ನೋಡುತ್ತಾ ಕಂಪಿಸಿ ಬೀಳುತ್ತಾರೆ. ಕಲ್ಕೀ! ಕಲ್ಕಿ! ಎಂದು ಚೀರಿ ಕನಸೊಡೆದು ಏಳುತ್ತಾರೆ. ಅವರ ನಿದ್ದೆ ಹಾರಿಹೋಗುತ್ತದೆ.

ಲೋಕದಲ್ಲಿ ದುರ್ಬಲ ವರ್ಗದವರ ಮೇಲೆ ಬಲಾಢ್ಯರ ದಬ್ಬಾಳಿಕೆಯು ನಿರಂತರವಾಗಿ ನಡೆಯುತ್ತಾ ಬಂದಿದೆ. ಇದರ ಮೂಲವು ಆರ್ಥಿಕ ಅಸಮಾನತೆಯೆಂಬುದು ನಿಡುಗಾಲದ ಸತ್ಯ ಕನ್ನಡ ನವೋದಯ ಸಾಹಿತ್ಯದಲ್ಲಿ ಸಾಮಾಜಿಕ ಕಳಕಳಿ ಒಂದು ಪ್ರಮುಖ ನೆಲೆ. ಅದರ ಅಭಿವ್ಯಕ್ತಿಯನ್ನು ನಾವು ಈ ಕವಿತೆಯಲ್ಲಿ ಕಾಣಬಹುದು. ಇಲ್ಲಿ ಬಳಸಿರುವ ದ್ವಿರುಕ್ತಿ ಪದಗಳು, ಅನುಕರಣಾವ್ಯಯಗಳು ಕವನದ ಓಘಕ್ಕೆ ಜೊತೆಯಾಗಿವೆ. ಬಡವರ ಹಸಿವೆಂಬ ಬೆಂಕಿ ಮಿತಿ ಮೀರಿದಾಗ ಏನೆಲ್ಲಾ ಆಗುತ್ತದೆಂಬುದನ್ನು ಕವಿ ಪ್ರತಿಮೆಗಳ ಮೂಲಕ ಕಟ್ಟಿಕೊಟ್ಟಿದ್ದಾರೆ. ಬಡವನ ಹಸಿವಿನ ಕಿಚ್ಚು ಲೋಕವನ್ನು ನಾಶ ಮಾಡುವ ಮುನ್ನ ಅವರನ್ನು ಶೋಷಿಸುವ ಸಿರಿವಂತರು ಎಚ್ಚೆತ್ತುಕೊಳ್ಳಬೇಕೆಂಬ ಸಂದೇಶವನ್ನು ನೀಡಿದ್ದಾರೆ.

### ಸರ್. ಎಂ. ವಿಶ್ವೇಶ್ವರಯ್ಯನವರ ಷಷ್ಠಿಪೂರ್ತಿ ಶಾಂತಿ ಹಬ್ಬ (೬೦ನೇ ವರ್ಷ ವರ್ಧಂತ್ಯುತ್ಸವ)

ಮೈಸೂರು ರಾಜ್ಯದ ಆ ಕಾಲದ ಸಾಮಾಜಿಕ ಬದಲಾವಣೆಯಲ್ಲಿ ಅತಿ ಪ್ರಮುಖ ಬದಲಾವಣೆಗೆ ಕಾರಣರಾದವರು ಸರ್. ಎಂ. ವಿಶ್ವೇಶ್ವರಯ್ಯನವರು. ಅವರು ದಿವಾನರಾಗಿದ್ದಾಗ ಮಾಡಿದ ಜನೋಪಕಾರಿ ಕಾರ್ಯಗಳಿಗಾಗಿ ಅವರನ್ನು ಇಂದಿಗೂ ಪ್ರಾತಃಸ್ಮರಣೀಯರೆಂದು ಸ್ಮರಿಸುತ್ತೇವೆ. ಸೆಂಟ್ರಲ್ ಕಾಲೇಜು ಕರ್ನಾಟಕ ಸಂಘದವರು ನಡೆಸಿದ ಸರ್. ಎಂ. ವಿಶ್ವೇಶ್ವರಯ್ಯನವರ ಅರವತ್ತನೆಯ ವರ್ಷವರ್ಧಂತ್ಯುತ್ಸವದಲ್ಲಿ ಅವರನ್ನು ವಿದ್ಯಾರ್ಥಿಗಳು ಬಹು ಆದರದಿಂದ ಸ್ಮರಿಸುತ್ತಾರೆ. ಅದನ್ನು 'ವಿಶ್ವೇಶ್ವರಯ್ಯನವರ ಷಷ್ಠಿಪೂರ್ತಿ ಶಾಂತಿಯ ಹಬ್ಬ" ಎಂದು ಕರೆಯುತ್ತಾರೆ.

ವಿಶ್ವೇಶ್ವರಯ್ಯನವರು ಸೆಂ.ಕಾ.ನಲ್ಲಿ ವ್ಯಾಸಂಗ ಮಾಡಿ ಹೆಸರು ಪಡೆದವರು. ದೊಡ್ಡವರಾದ ಮೇಲೆ ಒಳ್ಳೆಯ ಪ್ರಜಾಪ್ರಮುಖರಾಗಿ ತಮ್ಮ ಕರ್ತವ್ಯವನ್ನು ಸಾಧ್ಯವಾದ ಮಟ್ಟಿಗೂ ಮಾಡಬೇಕೆಂದು ಅಭಿಲಾಷೆಯುಳ್ಳ ವಿದ್ಯಾರ್ಥಿಗಳೆಲ್ಲರಿಗೂ ವಿ.ನವರ ಜೀವನಚರಿತ್ರೆ ಮಾರ್ಗದರ್ಶಿಯಾಗಿದೆ. ಅವರು 'ದಿವಾನ'ರಾಗಿದ್ದಾಗ ಮಾಡುತ್ತಿದ್ದ ಕೆಲಸ, ಮಾಡಬೇಕೆಂದಿದ್ದ

ಕೆಲಸಗಳೆಲ್ಲವೂ ಒಂದು ವಿಧದ ಗುರೂಪದೇಶದಂತೆ, ಮೈಸೂರು ದೇಶವು ಇತರ ದೇಶಗಳೊಡನೆ ಸರಿಸಮನಾಗಿ ತಲೆಯೆತ್ತಿಕೊಂಡಿರಬೇಕಾದರೆ ಅನೇಕ ಮಾರ್ಪಾಡುಗಳು ಅವಶ್ಯಕವೆಂದು ಭಾವಿಸಿ ಅದಕ್ಕೆ ಬೇಕಾದ ರಾಜಕೀಯ ಹಾಗೂ ಸಾಮಾಜಿಕ ಬದಲಾವಣೆಯನ್ನು ಮಾಡಲು ಯತ್ನಿಸಿದರು. ಕನ್ನಡಿಗರಿಗಾಗಿಯೇ ಒಂದು ವಿಶ್ವವಿದ್ಯಾಲಯವನ್ನು ಸ್ಥಾಪಿಸಿ ನವಜೀವನವನ್ನು ಕಲ್ಪಿಸಿದ್ದಕ್ಕಾಗಿ ಸಂಘದವರು ಅವರಿಗೆ ಕೃತಜ್ಞತೆ ಹೇಳುತ್ತಾರೆ.

ಸಂಘದ ಕಾರ್ಯದರ್ಶಿಗಳು ವಿಶ್ವೇಶ್ವರಯ್ಯನವರ ಜೀವನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ತಿಳಿಸುತ್ತಾರೆ. ವಿಶ್ವೇಶ್ವರಯ್ಯನವರು ಚಿಕ್ಕಬಳ್ಳಾಪುರದ ಮುದ್ದೇನಹಳ್ಳಿ ಗ್ರಾಮದಲ್ಲಿ ಜನಿಸಿದರು. ಚಿಕ್ಕಂದಿನಲ್ಲೇ ತಮ್ಮ ತಂದೆಯನ್ನು ಕಳೆದುಕೊಂಡು ತಮ್ಮ ವಿದ್ಯಾಭ್ಯಾಸವನ್ನು ಚಿಕ್ಕಬಳ್ಳಾಪುರದ ಪ್ರೌಢಶಾಲೆಯಲ್ಲಿ ಮುಗಿಸಿ, ಕಾಲೇಜು ಶಿಕ್ಷಣವನ್ನು ಸೆಂಟ್ರಲ್ ಕಾಲೇಜಿನಲ್ಲಿ ಪಡೆದರು. ಅಲ್ಲಿ ಬಿ.ಎ. ತೇರ್ಗಡೆಯಾದ ನಂತರ, ಎಂಜಿನಿಯರಿಂಗ್ ವಿದ್ಯೆ ಕಲಿಯಲು ಪುಣೆಗೆ ಹೋದರು. ಅಲ್ಲಿ ಅತ್ಯುತ್ತಮ ದರ್ಜೆಯಲ್ಲಿ ತೇರ್ಗಡೆಯಾಗಿ ಬೊಂಬಾಯಿ ಸರ್ಕಾರದಲ್ಲಿ ಅಸಿಸ್ಟೆಂಟ್ ಎಂಜಿನಿಯರಾಗಿ ತಮ್ಮ ವೃತ್ತಿ ಜೀವನವನ್ನು ಆರಂಭಿಸಿದರು. ಕಾಲೇಜಿನಲ್ಲಿದ್ದಾಗ ಅವರು ತೋರುತ್ತಿದ್ದ ಅಸಾಧಾರಣ ಬುದ್ಧಿಶಕ್ತಿ, ಅಪರಿಮಿತ ಶ್ರದ್ಧೆ, ದೇಶಸೇವೆ ಮಾಡಬೇಕೆಂಬ ದೃಢಸಂಕಲ್ಪ ಅವರ ಉಜ್ವಲ ಭವಿಷ್ಯತ್ತನ್ನು ಸೂಚಿಸುತ್ತಿದ್ದವು. ಅಲ್ಲಿ ತಮ್ಮ ನಿಪುಣತೆಯಿಂದ ಪ್ರಸಿದ್ಧರಾದ ನಂತರ ಮೈಸೂರಿಗೆ ಬಂದು ಇಲ್ಲಿ ಚೀಫ್ ಎಂಜಿನಿಯರಾದರು. ಮೂರು ವರ್ಷಗಳ ನಂತರ 'ದಿವಾನ'ರ ಸ್ಥಾನವನ್ನು ಪಡೆದು, ಆರು ವರ್ಷಗಳ ಕಾಲ ಆ ಸ್ಥಾನವನ್ನು ಅಲಂಕರಿಸಿದ್ದು ಆಚಂದ್ರಾರ್ಕವಾದ ಕೀರ್ತಿಯನ್ನು ಪಡೆದರು. ಅವರ ಕೆಳಗೆ ರಾಜ್ಯಭಾರವು ಸಮರ್ಪಕವಾಗಿದ್ದು, ಮೈಸೂರು ದೇಶದ ಅಭಿವೃದ್ಧಿಗಾಗಿ ಬಹಳಷ್ಟು ದುಡಿದರು. ಅವರ ಮೂಲಕ ನಮಗೆ ದೊರೆತಿರುವ ವಿಶ್ವವಿದ್ಯಾನಿಲಯವು ಈಗ ಬಾಲ್ಯವಸ್ಥೆಯಲ್ಲಿದ್ದರೂ ಮುಂದೆ ಪ್ರಫುಲ್ಲರಾಗಿ ಫಲಕಾರಿಯಾಗಬಹುದೆಂದು ನಂಬಬಹುದಾಗಿದೆ. ಕಾಲದೇಶ ವರ್ತಮಾನಗಳಿಗುಣವಾಗಿ ದೇಶೀಯ ವಿದ್ಯಾಭ್ಯಾಸವನ್ನು ನಮ್ಮ ವಿದ್ಯಾರ್ಥಿಗಳಿಗೆ ಕೊಡಲು ಈಗ ಅವಕಾಶವುಂಟಾಗಿದೆ. ಈ ಒಂದು ಮಹತ್ತರ ಉಪಕಾರಕ್ಕಾದರೂ ನಾವೆಲ್ಲಾ ಈ ಮಹಾನುಭಾವನಿಗೆ ಕೃತಜ್ಞರಾಗಿದ್ದೇವೆಂದು ಕ.ಸಂ.ದ ಕಾರ್ಯದರ್ಶಿಗಳು ತಮ್ಮ ಭಾಷಣದಲ್ಲಿ ಹೇಳಿದ್ದಾರೆ.

ಅಷ್ಟೇ ಅಲ್ಲದೇ ವಿಶ್ವೇಶ್ವರಯ್ಯನವರ ಜೀವನವು ಆತ್ಮ ಸಮರ್ಪಣ, ಕಾರ್ಯೋತ್ಸಾಹಗಳನ್ನು ಕಲಿಸುವ ಪಾಠವಾಗಿದೆ. ಅವರು 'ದಿವಾನ'ರ ಪದವಿಯಲ್ಲಿದ್ದಾಗ ದೇಶದ ಏಳಿಗೆಯ ವಿಷಯಗಳನ್ನು ಕುರಿತು ಎಷ್ಟೋ ರಾತ್ರಿಗಳನ್ನು ನಿದ್ರೆ ಇಲ್ಲದೇ ಕಳೆದಿದ್ದಾರೆ. ಅವರ ನಡತೆ, ದಿನಚರಿ ಬೇರೆಯವರಿಗೆ ಮಾದರಿಯಾಗಿವೆ. ಅವರು ದೇಶಸೇವೆ ಮಾಡಲೆಂದು ಭಗವಂತನು, ಜಗದೀಶ್ವರನು ಅವರಿಗೆ ಆಯುರಾರೋಗ್ಯ ಭಾಗ್ಯಗಳನ್ನು ಕೊಡಲೆಂದು ತಮ್ಮಗಳೊಡನೆ ಪ್ರಾರ್ಥಿಸುವೆನೆಂದು ಕಾರ್ಯದರ್ಶಿಗಳು ಹೇಳಿದ್ದಾರೆ. ಇದರಿಂದ ವಿಶ್ವೇಶ್ವರಯ್ಯನವರು ಎಂತಹ ಮಹಾನ್ ವ್ಯಕ್ತಿ, ಜನಸೇವಕ, ಸಮಾಜಸೇವಕ, ದಕ್ಷ ಹಾಗೂ ಪ್ರಾಮಾಣಿಕ ಅಧಿಕಾರಿಗಳಾಗಿದ್ದರೆಂದು ತಿಳಿಯಬಹುದಾಗಿದೆ.

೧೯೨೨ರ ಮೂರನೇ ಸಂಚಿಕೆಯ 'ವಸ್ತುಕೋಶ'ದಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರ ಷಷ್ಠ್ಯಪೂರ್ತಿ ಶಾಂತಿಯ ಹಬ್ಬದ ಬಗೆಗಿನ ವರದಿಯನ್ನು ಸಂಪಾದಕರು ಬಹಳ ಸೊಗಸಾಗಿ ಬರೆದಿದ್ದಾರೆ. ಆ ಹಬ್ಬವು ಎಂತಹದ್ದೆಂದರೆ ಇಡೀ ಬೆಂಗಳೂರನ್ನೇ ಒಂದು ಮನೆಯಂತೆ ಮಾಡಿದ ಹಬ್ಬ. ನಡೆದ ದಿನಾಂಕ ೧೭.೦೯.೧೯೨೧ ಸ್ಥಳ : ಜನೋಪಕಾರಿ ದೊಡ್ಡಣ್ಣನವರ ನಾಟಕ ಶಾಲೆ. ಎಲ್ಲಾ ಜಾತಿಯ, ಎಲ್ಲಾ ವಯಸ್ಸಿನ, ಎಲ್ಲಾ ಕಸುಬಿನ ಜನರಿಂದ ಆ ಸಭಾಂಗಣವು ಕಿಕ್ಕಿರಿಯುವಂತೆ ತುಂಬಿತ್ತೆಂದೂ, ಶ್ರೀ ಮಹಾರಾಜರ ಹಾಗೂ ಸರ್. ಎಂ.ವಿ. ಯವರ ಭಾವಚಿತ್ರಗಳು ಪುಷ್ಪಮಾಲೆಯಿಂದ

ಅಲಂಕರಿಸಲ್ಪಟ್ಟಿದ್ದವೆಂದು ಹೇಳಿದ್ದಾರೆ. ದಿವಾನ್ ಬಹಾದ್ದೂರ್ ಕೆ.ಪಿ. ಪುಟ್ಟಣ್ಣ ಶೆಟ್ಟರು ಅಗ್ರಾಸನವನ್ನು ವಹಿಸಿದ್ದರು. ದೇವತಾಸ್ತುತಿಯ ನಂತರ ಡಿ.ವಿ. ಗುಂಡಪ್ಪನವರು ಹಾಗೂ ಕಡಬದ ನಂಜುಂಡ ಶಾಸ್ತ್ರಿಗಳು ಬರೆದ ಕನ್ನಡ ಮತ್ತು ಸಂಸ್ಕೃತ ಪದ್ಯಗಳು ಮನೋಹರವಾಗಿ ಓದಲ್ಪಟ್ಟವು. ಸಂಘದ ಅಧ್ಯಕ್ಷರಾದ ಬಿ. ವೆಂಕಟನಾರಾಯಣಪ್ಪನವರು, ಡಿ.ವಿ. ಗುಂಡಪ್ಪನವರು, ಕೆ.ಎಚ್. ರಾಮಯ್ಯನವರು, ರಾಮಚಂದ್ರರಾವ್ ಸಿಂಧಿಯರವರು, ಸಂಘದ ಕಾರ್ಯದರ್ಶಿಗಳಾದ ಸಿ.ರಂಗಾಚಾರ್ಯರು ಕ್ರಮವಾಗಿ ಸರ್. ಎಂ.ವಿ.ಯವರ ಗುಣಗಾನ ಮಾಡಿದರೆಂದು ತಿಳಿಸಿದ್ದಾರೆ.

‘ಮುಂಬೈ ಸರ್ಕಾರಕ್ಕೆ ‘೨೩’ವರ್ಷ ಸೇವೆ ಸಲ್ಲಿಸಿ ವಿಶ್ವೇಶ್ವರಯ್ಯನವರು ೧೯೦೮ರಲ್ಲಿ ತಮ್ಮ ಕೆಲಸಕ್ಕೆ ರಾಜಿನಾಮೆ ನೀಡಿದರು. ೧೯೦೯ ನವೆಂಬರ್ ೧೫ರಂದು ಮೈಸೂರು ರಾಜ್ಯದ ಪ್ರಧಾನ ಎಂಜಿನಿಯರ್ ಆಗಿ ಅಧಿಕಾರ ಸ್ವೀಕರಿಸಿದರು. ರಾಜ್ಯದ ಪರಿಸ್ಥಿತಿಯನ್ನು ಅಧ್ಯಯನ ಮಾಡಿ ಎಲ್ಲಿ ಕೈಗಾರಿಕೆ ಸ್ಥಾಪಿಸಬಹುದು. ಜಲಾಶಯಗಳನ್ನು ನಿರ್ಮಿಸಬಹುದೆಂದು ಪರಿಶೀಲಿಸಿದರು. ರೈಲ್ವೆ ಕಾರ್ಯದರ್ಶಿಯಾಗಿ ಹೊಸ ರೈಲು ಮಾರ್ಗಗಳ ಯೋಜನೆಯನ್ನು ಸರ್ಕಾರದ ಮುಂದಿಟ್ಟರು. ೧೯೧೨ರಲ್ಲಿ ವಿ.ನವರು ‘ದಿವಾನ’ ಪದವಿಯನ್ನು ಒಪ್ಪಿಕೊಂಡರು. ಈ ಸಂದರ್ಭದಲ್ಲಿ ತಮ್ಮ ತಾಯಿ ಮತ್ತು ಬಂಧುಗಳಿಂದ ಕೆಲಸ ಕೊಡಿಸುವ ಮತ್ತು ಪ್ರಭಾವ ಬೀರುವುದನ್ನು ತಮ್ಮಿಂದ ಕೇಳಬಾರದೆಂದು ವಾಗ್ದಾನ ಪಡೆದರಂತೆ.

೧೯೧೧ರಲ್ಲಿ ಕೃಷ್ಣರಾಜಸಾಗರ ನಿರ್ಮಾಣ ಪ್ರಾರಂಭವಾಯಿತು. ೧೯೧೩ರಲ್ಲಿ ಮೈಸೂರು ಹಾಸನ ಅರಸೀಕೆರೆ ರೈಲುಮಾರ್ಗದ ಕಾರ್ಯ ಆರಂಭವಾಯಿತು. ೧೯೧೩ರಲ್ಲೇ ಮೈಸೂರು ಬ್ಯಾಂಕನ್ನು ಸ್ಥಾಪಿಸಿದರು. ೧೯೧೪ಂಲ್ಲಿ ಬೆಂಗಳೂರಿನಲ್ಲಿ ಮೆಕ್ಯಾನಿಕಲ್ ಎಂಜಿನಿಯರಿಂಗ್ ಸ್ಕೂಲ್ ಸ್ಥಾಪಿತವಾಯಿತು. ಮೈಸೂರು ಶಿಕ್ಷಣ ಕ್ಷೇತ್ರದಲ್ಲಿ ಕ್ರಾಂತಿಯುಂಟು ಮಾಡಿದ ಇವರು ೨೨.೧೯೧೯ರಂದು ಮೈಸೂರು ವಿ.ವಿ.ದ ಸ್ಥಾಪನೆಗೂ ಕಾರಣರಾದರು. ಇದೇ ಕಾಲದಲ್ಲಿ ಸರ್ಕಾರಿ ಸಾಬೂನು ಕಾರ್ಖಾನೆ, ಗಂಧದ ಎಣ್ಣೆ ಕಾರ್ಖಾನೆಗಳನ್ನು ಪ್ರಾರಂಭಿಸಲಾಯಿತು. ಈ ಬಗೆಯಲ್ಲಿ ವಿಶ್ವೇಶ್ವರಯ್ಯನವರು ಕಾರ್ಖಾನೆಗಳನ್ನು ಪ್ರಾರಂಭಿಸಿದರು. ಈ ಬಗೆಯಲ್ಲಿ ವಿಶ್ವೇಶ್ವರಯ್ಯನವರು ಮೈಸೂರು ರಾಜ್ಯದ ಮುಖ್ಯ ಎಂಜಿನಿಯರ್, ದಿವಾನರಾಗಿದ್ದ ಕಾಲದಲ್ಲಿ ರಾಜ್ಯದ ಸರ್ವತೋಮುಖ ಬೆಳವಣಿಗೆಯಾಗಿ ಮೈಸೂರು ಮಾದರಿ ರಾಜ್ಯ ಎನಿಸಿಕೊಂಡಿತು. ಭದ್ರಾವತಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಮತ್ತು ವಿಮಾನ ಕಾರ್ಖಾನೆ ಅಸ್ಥಿತ್ವಕ್ಕೆ ಬಂದವು. ಒಟ್ಟಿನಲ್ಲಿ ವಿಶ್ವೇಶ್ವರಯ್ಯನವರ ಜೀವನ ಚರಿತ್ರೆಯೆಂದರೆ ಕರ್ನಾಟಕ ರಾಜ್ಯದ ಮತ್ತು ಭಾರತದ ಕೈಗಾರಿಕಾ ಪ್ರಗತಿಯ ಇತಿಹಾಸವನ್ನೋದಿದಂತೆ. ಇವರ ಸಲಹೆ, ಸಹಕಾರ ಮತ್ತು ಉತ್ತೇಜನದಿಂದ ಇಂದು ಅನೇಕ ಕೈಗಾರಿಕೆಗಳೂ, ಕಾರ್ಖಾನೆಗಳೂ ಉಳಿದು ಬೆಳೆದು ಬಂದಿವೆ.

ವಿಶ್ವೇಶ್ವರಯ್ಯನವರು ಗಾಂಧೀಜಿ, ಗೋಖಲೆಯಂತಹ ಮಹನೀಯರ ಸ್ನೇಹ ಸಂಪಾದಿಸಿದ್ದರು. ಜಗತ್ತಿನಾದ್ಯಂತ ವಿಶ್ವೇಶ್ವರಯ್ಯನವರಿಗೆ ಗೌರವವಿತ್ತು. ಅನೇಕ ವಿ.ವಿ.ಗಳು ಇವರಿಗೆ ಗೌ. ಡಾಕ್ಟರೇಟ್ ಪದವಿ ಇತ್ತು ಸನ್ಮಾನಿಸಿದ್ದವು. ಅವುಗಳಲ್ಲಿ ಅವರೇ ಸ್ಥಾಪಿಸಿದ ಮೈ.ವಿ.ವಿ.ವೂ ಒಂದು ೧೯೧೧ರಲ್ಲಿ ಸಿ.ಐ.ಇ. ಬಿರುದೂ, ೧೯೧೫ರಲ್ಲಿ ಕೆ.ಸಿ.ಐ.ಇ. ಬಿರುದನ್ನು ಕೊಟ್ಟು ಬ್ರಿಟಿಷ್ ಸರ್ಕಾರ ಇವರನ್ನು ಗೌರವಿಸಿತು. ೧೯೩೫ರಲ್ಲಿ ಬಂಗಾಳದ ಏಷ್ಯಾಟಿಕ್ ಸೊಸೈಟಿಯು ‘ದುರ್ಗಾ ಪ್ರಸಾದ್ ಖೈತಾನ್’ ಸುವರ್ಣ ಪದಕವನ್ನು ಕೊಟ್ಟು ಗೌರವಿಸಿತು. ಅದೇ ವರ್ಷ ‘ಭಾರತರತ್ನ’ ಪ್ರಶಸ್ತಿಯನ್ನು ನೀಡಿ ಭಾರತ ಸರ್ಕಾರ ಗೌರವಿಸಿತು. ಅತ್ಯಂತ ದಕ್ಷ, ವಿಚಕ್ಷಣ, ತೀಕ್ಷ್ಣಮತಿಯಾದ ಇವರು ತಮ್ಮ ಇಡೀ ಜೀವಮಾನವನ್ನೇ ಶಿಸ್ತಿಗೆ ಒಳಪಡಿಸಿದ್ದು ಎಂದೂ ನೀತಿ ನಿಯಮಗಳನ್ನು ತಪ್ಪುತ್ತಿರಲಿಲ್ಲ.”[೧] ಮಹೋತ್ಸವದಲ್ಲಿ ಭಾಗವಹಿಸಿದವರೆಲ್ಲರೂ

---

೧. ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ - ಕನ್ನಡ ಅಧ್ಯಯನ ಸಂಸ್ಥೆ - ಮೈ.ವಿ.ವಿ. - ೧೯೭೯ - ವಿಶ್ವೇಶ್ವರಯ್ಯ, ಮೋಕ್ಷಗೊಂಡಂ - ಪು.ಸಂ. ೧೩೪೬

ಸರ್. ಎಂ.ವಿ. ಯವರಿಗೆ ಶುಭಹಾರೈಕೆಗಳನ್ನು ತಂತಿಯ ವರ್ತಮಾನವನ್ನು ಕಳುಹಿಸಬೇಕೆಂದು ತೀರ್ಮಾನವಾಗಿ, ತಂತಿಯ ವರ್ತಮಾನದ ವಾಕ್ಯಗಳನ್ನು ಎಂ.ಶಾಮರಾಯರು ಓದಿ ಎಲ್ಲರ ಅನುಮತಿಯನ್ನು ತೆಗೆದುಕೊಂಡರು. ಅಲ್ಲಿ ನಡೆದ ಒಂದು ವಿಶೇಷವೆಂದರೆ ಅಂದು ಮಾತನಾಡುವವರೆಲ್ಲಾ ಕನ್ನಡದಲ್ಲಿಯೇ ಮಾತನಾಡಬೇಕೆಂದು ನಿಶ್ಚಯವಾಗಿದ್ದರಿಂದ ಇಂಗ್ಲಿಷ್ ವಾಕ್ಯಗಳನ್ನು ಓದಬೇಕಾದರೆ ಎಂ. ಶಾಮರಾಯರು ಮಹಾಜನಗಳ ಅಪ್ಪಣೆಯನ್ನು ಕೇಳಬೇಕಾಯಿತು. "ಈಗ್ಗೆ ಕೆಲವು ವರ್ಷಗಳ ಹಿಂದೆ ದೊಡ್ಡ ಸಭೆಗಳು ಸೇರಿದಾಗ ಯಾರಾದರೂ ಬಹು ಸಂಕೋಚದಿಂದ ಒಂದೆರಡು ಕನ್ನಡ ಮಾತುಗಳನ್ನಾಡಬೇಕಾಗಿ ಬಂದರೆ ಅದಕ್ಕೆ ಜನರ ಕ್ಷಮಾಪಣೆಯನ್ನು ಕೇಳಬೇಕಾಗಿತ್ತು. ಈಗ ಇಷ್ಟು ಬೇಗ ಸ್ಥಿತಿಯು ಇಷ್ಟು ಉತ್ತಮವಾಯಿತಲ್ಲ ಕರ್ಣಾಟಕವು ಪ್ರಬುದ್ಧವಾಯಿತು" ಎಂದು ಅನೇಕರು ಆನಂದಗೊಂಡರು" ಎಂದು ಸಂಪಾದಕರು ಬಹಳ ಸಂತಸದಿಂದ ಬರೆದಿದ್ದಾರೆ.

ಹೊಸಗನ್ನಡ ಸಾಹಿತ್ಯಾಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸಿದ ಪ್ರಬುದ್ಧ ಕರ್ಣಾಟಕ, ಅದರ ಸಂಪಾದಕರ, ಲೇಖಕರ, ವಿದ್ಯಾರ್ಥಿಗಳ ಭಾಷಾಭಿಮಾನವನ್ನು, ತಾಯ್ನುಡಿಯ ಏಳಿಗೆಯಿಂದ ಅವರಿಗಾದ ಆನಂದವನ್ನು ಮೇಲಿನ ಮಾತುಗಳು ತಿಳಿಸುತ್ತದೆ.

ನಂತರ ಟಿ.ಪಿ. ಕೈಲಾಸಂರವರು ಇದಕ್ಕಾಗಿಯೇ ಬರೆದಿದ್ದ 'ನಂಬಾಯ್ದು' ಅಥವ 'ಕಟ್ಟಿಟ್ಟ ಕುರಿ ಬಿಟ್ಟರೆ ಹುಲಿ' ಎಂಬ ಒಂದು ಸಾಮಾಜಿಕ ನಾಟಕವನ್ನು ಅಮೆಚೂರ್ ನಾಟಕ ಮಂಡಲಿಯವರು ಪ್ರದರ್ಶಿಸಿದರು. ಆ ದಿನ ಅವರಿಂದ ಆದ ಉಪಕಾರ ಅಷ್ಟಿಷ್ಟಲ್ಲ ಎಂದು ಸಂಪಾದಕರು ಅವರಿಗೆ ತಮ್ಮ ವಂದನೆಗಳನ್ನು ತಿಳಿಸುತ್ತಾರೆ.

ಕೊನೆಯಲ್ಲಿ ಸಂಘದ ಉಪಾಧ್ಯಕ್ಷರಾದ ವೆಂಕಣ್ಣಯ್ಯನವರು ಎದ್ದು ನಿಂತು ಉತ್ಸವವು ಸಾಂಗವಾಗಿ ನೆರವೇರಲು ಸಹಾಯ ಮಾಡಿದ ಮಹನೀಯರನ್ನೆಲ್ಲಾ ವಂದಿಸಿದ ಮೇಲೆ, ಮಂಗಳ ವಾದ್ಯದೊಡನೆ ಸಭೆಯು ಮುಕ್ತಾಯವಾಗುತ್ತದೆ. ನಂತರ ಜನರ ಗದ್ದಲದಲ್ಲಿ ಸಂಪಾದಕರ ಕಿವಿಗೆ ಈ ಮಾತುಗಳು ಬೀಳುತ್ತವೆ. "ಈಗ Democratic times! (ಪ್ರಜಾಪ್ರಭುತ್ವದ ಕಾಲ); ನೋಡಿದಿಯಾ ವಿಶ್ವೇಶ್ವರಯ್ಯನವರು ಬಂದ ಮೇಲೆ ಎಷ್ಟು ಬೇಗ, ಹುಡುಗರು, ದೊಡ್ಡವರು, ಎಲ್ಲರಲ್ಲಿಯೂ, ಜನರಲ್ಲಿ ಈ Spirit ಬಂದು ಬಿಟ್ಟಿತು! ಚಿಂತೆಯಿಲ್ಲ. ವಿಶ್ವೇಶ್ವರಯ್ಯನವರು ಕಷ್ಟಪಟ್ಟಿದ್ದಕ್ಕೂ ಸಾರ್ಥಕ. ಎಷ್ಟು ದೊಡ್ಡ ಮನುಷ್ಯನೇ ಆಗಲಯ್ಯ! ಆತನು ಜೀವಂತನಾಗಿರುವಾಗಲೇ ಇಂಥ ಉತ್ಸವಗಳನ್ನು ಮಾಡುವುದು Unique honour (ಅನನ್ಯ ಲಭ್ಯವಾದ ಗೌರವ) ಎಂಬುವು.

ಈ ಮಾತುಗಳು ದೇಶದ ರಾಜಕೀಯ, ಸಾಮಾಜಿಕ ಬದಲಾವಣೆಯ ಸಂಧಿಕಾಲವನ್ನು, ಪ್ರಜಾಪ್ರಭುತ್ವದ ಆಶಾವಾದವನ್ನೂ, ವಿಶ್ವೇಶ್ವರಯ್ಯನವರ ಮಹತ್ಸಾಧನೆಯನ್ನು, ಜನೋಪಕಾರಿಗಳನ್ನು ಸ್ಮರಿಸುವ ನಮ್ಮ ಜನರ ಸದ್ಗುಣವನ್ನೂ, ವೇದ್ಯಗೊಳಿಸುತ್ತವೆಂದರೆ ತಪ್ಪಾಗಲಾರದು. ಪ್ರಜಾಪ್ರಭುತ್ವದಲ್ಲಿ ಸರ್ಕಾರಿ ಅಧಿಕಾರಿಗಳು ಶ್ರೇಷ್ಠತೆಯನ್ನು ಸಾಧಿಸುವುದಕ್ಕೆ ಪ್ರ.ಕ.ವು ಒಂದು ಮಾನದಂಡವನ್ನು ಕಟ್ಟಿಕೊಡುತ್ತಿತ್ತು.

## ಪುರಂದರ ದಾಸರು – ಜೀವನ ವೃತ್ತಾಂತ ಮತ್ತು ಬೋಧನೆ ಹಾಗೂ ಸಾಹಿತ್ಯ ಸಂಪತ್ತು

ಕನ್ನಡ ಸಾಹಿತ್ಯದಲ್ಲಿ ಹರಿದಾಸ ಸಾಹಿತ್ಯ ಒಂದು ಪ್ರಮುಖ ಘಟ್ಟ. ಭಕ್ತಿಪ್ರಧಾನ ಹಾಗೂ ನೀತಿಬೋಧಕ ಕೀರ್ತನೆಗಳನ್ನು ರೂಪಿಸಿದ್ದು ದಾಸ ಸಾಹಿತ್ಯದ ಹಿರಿಮೆ, ಸಮಾಜ ವಿಮರ್ಶೆ, ಆತ್ಮ ನಿವೇದನೆ, ಅರ್ಪಣಾ ಭಾವ, ಹರಿನಾಮಸ್ಮರಣೆ ಅದರ ಮೂಲ ಸೆಲೆಗಳು, ತತ್ತ್ವವಿವೇಕವನ್ನು ಸರಳಗನ್ನಡದಲ್ಲಿ ಹಾಡುಗಬ್ಬವಾಗಿ ರೂಪಸಿ ಪಸರಿಸಿದ

ಹೆಗ್ಗಳಿಕೆ ದಾಸವರೇಣ್ಯರಿಗೆ ಸಲ್ಲುತ್ತದೆ. ವಚನ ಸಾಹಿತ್ಯದಂತೆಯೇ ವಿಶ್ವಸಾಹಿತ್ಯಕ್ಕೆ ದಾಸಸಾಹಿತ್ಯದ ಕೊಡುಗೆ ಅಮೋಘವಾದುದು.

'ದಾಸರೆಂದರೆ ಪುರಂದರ ದಾಸರಯ್ಯ' ಎಂದು ತಮ್ಮ ಗುರುಗಳಿಂದ ಹೊಗಳಿಸಿಕೊಂಡ 'ಪುರಂದರದಾಸ'ರ ಬಗ್ಗೆ, ಪುರಂದರ ದಾಸರು ಜೀವನ ವೃತ್ತಾಂತ[೧] ಎಂಬ ಲೇಖನವೂ ಹಾಗೂ ಪುರಂದರದಾಸರು ಅವರ ಕೀರ್ತನೆಗಳಲ್ಲಿರುವ ಬೋಧನೆ ಮತ್ತು ಸಾಹಿತ್ಯ ಸಂಪತ್ತು[೨] ಎಂಬ ಎರಡು ಲೇಖನಗಳು ಪ್ರಬುದ್ಧ ಕರ್ಣಾಟಕದಲ್ಲಿ ಬಂದಿವೆ.

ಭಗವದ್ಭಕ್ತರ ಸಮುದಾಯದಲ್ಲಿ ಪುರಂದರದಾಸರಂಥವರು ಅತಿ ವಿರಳ. ಅವರ ಪ್ರಾಸಾದಿಕ ಪದಗಳನ್ನು ಕೇಳದವರಾರಾದರೂ ಇದ್ದರೆ ಅವರು ದುರ್ದೈವಿಗಳೆಂದು ಹೇಳುತ್ತಾರೆ. ಅವರ ಯೋಗ್ಯತೆಯನ್ನು (ಸಾಧನೆಯನ್ನು) ಪ್ರಪಂಚಕ್ಕೆ ತಿಳಿಸುವುದು ತಮ್ಮ ಕರ್ತವ್ಯವೆಂದು ಭಾವಿಸುತ್ತಾರೆ. ಪುರಂದರ ದಾಸರ ಲಲಿತವಾದ ಹಾಗೂ ಸರಳವಾದ ಬರವಣಿಗೆಯೇ ಅವರ ಜನಪ್ರಿಯತೆಗೆ ಪ್ರಮುಖ ಕಾರಣವೆನ್ನುತ್ತಾರೆ. ಅವರೊಬ್ಬ ಮಹಾಪುರುಷರು, ಜನರಿಗೆ ಭಕ್ತಿಮಾರ್ಗವನ್ನು ತೋರಿಸಿದ ಭಕ್ತಾಗ್ರಣಿ, ವೇದಾಂತಿ ಮತ್ತು ವಿರಕ್ತ. ಇವರ ಕೀರ್ತನೆಗಳು ಸರ್ವಜನಾದರಣೀಯವಾಗಿದ್ದು ಪುರುಷರು, ಸ್ತ್ರೀಯರು, ಬಡವರು, ಭಾಗ್ಯವಂತರು ಮುದುಕರು, ಪಂಡಿತರು, ಪಾಮರರು ಎಲ್ಲರಿಗೂ ಒಂದೇ ರೀತಿ ಆನಂದವನ್ನುಂಟು ಮಾಡುತ್ತವೆ. ಪುರಂದರ ದಾಸರ ಹುಟ್ಟಿನ ಬಗ್ಗೆ ಒಂದು ಐತಿಹ್ಯವಿದೆ. ಅದೇನೆಂದರೆ ಒಮ್ಮೆ ನಾರದನು ದ್ವಾರಕೆಗೆ ಬಂದು ಹಿಂದೆ ತಾನು ದಾಸೀಕುಮಾರನಾಗಿದ್ದ ಪಾಪವನ್ನು ಹೋಗಲಾಡಿಸಬೇಕೆಂದು ನಾರಾಯಣನನ್ನು ಬೇಡಿಕೊಂಡಾಗ ಅವನು 'ಭೂಲೋಕದಲ್ಲಿ ವಿಪ್ರನಾಗಿ ಹುಟ್ಟು' ಎಂದು ಅನುಜ್ಞೆಯನ್ನಿತ್ತನು. ಈ ರೀತಿ ನಾರದನು ವರದಪ್ಪನಾಯಕನೆಂಬುವನಿಗೆ ಮಗನಾಗಿ ಹುಟ್ಟಿ, ಪುರಂದರನೆಂಬ ಹೆಸರಿನಿಂದ ಪಂಡ್ರಾಪುರದಲ್ಲಿ ದೊಡ್ಡ ಸಾಹುಕಾರನಾಗಿ ವ್ಯಾಪಾರ ಮಾಡುತ್ತಿರುತ್ತಾನೆ. ಆಗ ಶ್ರೀ ಹರಿಯು ವಿಪ್ರವೇಷದಿಂದ ತನ್ನಮಗನ ಮದುವೆಗೆ ಎಷ್ಟು ಬಾರಿ ಬಂದು ಸಹಾಯ ಕೇಳಿದರೂ 'ಆಗ ಬಾ, ಈಗ ಬಾ' ಎಂದು ಆರು ತಿಂಗಳು ಅವನನ್ನು ತಿರುಗಿಸಿ ಕಳುಹಿಸುವುದು ನಂತರ ಆತನ ಪತ್ನಿ ಲಕ್ಷ್ಮೀಬಾಯಿಯ ಬಳಿಗೆ ಆ ವಿಪ್ರನು ಹೋದಾಗ ಆಕೆ ತನ್ನ ತವರಿನವರು ನೀಡಿದ್ದ ವಜ್ರದ ಮೂಗುತಿಯನ್ನು ನೀಡುತ್ತಾಳೆ. ನಂತರ ಏನಾಯಿತೆಂಬುದು ಎಲ್ಲರಿಗೂ ತಿಳಿದಿರುವ ಸಂಗತಿ.

ತನ್ನ ಸರ್ವಸ್ವವನ್ನು ಬ್ರಾಹ್ಮಣೋತ್ತಮರಿಗೆ ದಾನ ಮಾಡಿ, ಪುರಂದರರು ವೈರಾಗ್ಯವನ್ನು ತಾಳುತ್ತಾರೆ. ಈ ಕಥೆಯನ್ನು ಎಲ್ಲರೂ ಹೇಳುತ್ತಾರೆ. ಕೆಲವರು ಈತನು ಪುರಂದರ ಪುರದವನೆಂದು, ಕೆಲವರು ಈತ ವಿಜಯನಗರದಲ್ಲಿ ಹುಟ್ಟಿ ನಂತರ ಪಂಡ್ರಾಪುರಕ್ಕೆ ಹೋದನೆಂದು ಹೇಳುತ್ತಾರೆ. ಎರಡನೇ ಅಭಿಪ್ರಾಯದವರ ಪ್ರಕಾರ ಪುರಂದಾಸರು ಆನೆಗೊಂದಿಯ ಸಂಕಲಾಪುರದಲ್ಲಿ ಹುಟ್ಟಿದರು. ಜೀವನದಲ್ಲಿ ವೈರಾಗ್ಯ ವುಂಡಾದಾಗ ವಿಜಯನಗರದ ವಿಠಲದೇವರು ಇವರ ಸ್ವಪ್ನದಲ್ಲಿ ಬಂದು 'ಮಹಮ್ಮದೀಯರು ನನ್ನನ್ನು ಇಲ್ಲಿ ಬಾಳಿಸರು. ಆದ್ದರಿಂದ ನನ್ನನ್ನು ಪಂಡ್ರಾಪುರಕ್ಕೆ ತೆಗೆದುಕೊಂಡು ಹೋಗು' ಎಂದು ಹೇಳಿದರು. ನಂತರ ಮಾರನೇ ದಿನವೇ ಪುರಂದರರು ತಮ್ಮ ಹೆಂಡತಿ ಮಕ್ಕಳೊಡನೆ ಆ ವಿಗ್ರಹವನ್ನು ಜೋಳಿಗೆಯಲ್ಲಿ ಹಾಕಿಕೊಂಡು ಪಂಡ್ರಾಪುರಕ್ಕೆ ಹೋಗಿ ಆ ವಿಗ್ರಹ ಪ್ರತಿಷ್ಠಾಪನೆ ಮಾಡಿದರು. ಒಂದು ದಿನ ಅಲ್ಲಿನ ಭೀಮಾ ನದಿಯ ಚಂದ್ರಭಾಗವೆಂಬ ಸ್ಥಳದಲ್ಲಿ ಸ್ನಾನ ಮಾಡುವಾಗ 'ಪುರಂದರ ವಿಠಲ' ಎಂದು

---

೧. ಪ್ರ.ಕ. ೧೯೨೧ – ದುರ್ಮತಿ ಸಂವತ್ಸರ – ೮ನೇ (ವಿನಾಯಕನ) ಸಂಚಿಕೆ

೨. ಪ್ರ.ಕ. ೧೯೨೧ – ದುರ್ಮತಿ ಸಂವತ್ಸರ – ೯ನೇ (ದೀಪಾವಳಿ) ಸಂಚಿಕೆ

ಬರೆದಿದ್ದ ಕಲ್ಲು ಸಿಕ್ಕಲು ಅಂದಿನಿಂದ ಪುರಂದರನೆಂಬ ಹೆಸರನ್ನಿಟ್ಟುಕೊಂಡು ವಿಠಲನ ಧ್ಯಾನದಲ್ಲಿ ನಿರತನಾಗಿರುತ್ತಿದ್ದನು. ಈತನ ಜನ್ಮಸ್ಥಾನ ಪಂಡ್ರಾಪುರವೇ ಇರಬೇಕೆಂದು ಕಿಟ್ಟೆಲ್ ಹಾಗೂ ರೈಸ್‌ರವರು ಬರೆದಿದ್ದಾರೆ. ಆದರೆ ಪುರಂದರಗಡದಲ್ಲಿ ಹುಟ್ಟ ಇವರು ತಿಳಿಗನ್ನಡದಲ್ಲಿ ಕೀರ್ತನೆಯನ್ನು ಬರೆಯುವುದು ಅಸಂಭವವೆಂಬುದು ಲೇಖಕರ ಅಭಿಪ್ರಾಯವಾಗಿದೆ. ಅಂತೂ ಇವರು ವಿಜಯನಗರದಲ್ಲಿದ್ದುದು ನಿಜವೆಂದು ಲೇಖಕರು ಒಪ್ಪಿಕೊಳ್ಳುತ್ತಾರೆ. ೧೫೬೫ರ ತಾಳೀಕೋಟೆಯ ಯುದ್ಧದ ಸಂದರ್ಭದಲ್ಲಿ ಮಹಮ್ಮದೀಯರ ಹಾವಳಿ ತಡೆಯದೆ ಇವರು ಪಂಡ್ರಾಪುರಕ್ಕೆ ಹೋದರೆಂದು ಧಾರಾಳವಾಗಿ ಹೇಳಬಹುದೆಂದು ಲೇಖಕರು ಹೇಳಿದ್ದಾರೆ. ಈತನ ಕೃತಿ (ಕೀರ್ತನೆ)ಗಳನ್ನು ನೋಡಿದಾಗ ಪುರಂದರರು ದಕ್ಷಿಣ ಭಾರತದ ಎಲ್ಲಾ ಯಾತ್ರಾಸ್ಥಳಗಳಿಗೂ ಹೋದಂತೆ ತಿಳಿಯುತ್ತದೆ.

ಹೀಗೆ ಸಂಚರಿಸುತ್ತಿರುವಾಗ ಹೈದರಾಬಾದಿನ ಗದ್ವಾರ್ಲ್ ಬಳಿಯ ವನಪರ್ತಿಯಲ್ಲಿ ದೈವಾಧೀನರಾದಂತೆ, ಈಗಲೂ ವಾನಪರ್ತಿಯಲ್ಲಿ ಪುರಂದರ ದಾಸರಕಟ್ಟೆ ಎಂಬ ಒಂದು ಕಟ್ಟೆ ಇದ್ದು, ಅಲ್ಲಿನ ವೈದಿಕ ಮಾಧ್ವರು ಇಂದಿಗೂ ಆತನ ಮೃತ ತಿಥಿಯನ್ನು ಮಾಡುತ್ತಾರೆ. ಇವರು ತನ್ನ ಕೀರ್ತನೆಗಳಲ್ಲಿ ವ್ಯಾಸರಾಯರನ್ನು ಹಾಗೂ ಒಂದು ಕೀರ್ತನೆಯಲ್ಲಿ ಕನಕ ದಾಸರನ್ನೂ ಸ್ತುತಿಸಿರುವುದರಿಂದ ಇವರಿಬ್ಬರೂ (ಕನಕದಾಸರು–ಪುರಂದರದಾಸರು) ಸಮಕಾಲೀನರೆಂದು ಹೇಳಬಹುದು.

ಈತನು ಆಂಜನೇಯ (ಪ್ರಾಣದೇವರು), ಭೀಮಸೇನ, ಮಧ್ವಾಚಾರ್ಯರು ಇವರ ಸ್ತುತಿಯನ್ನು ಬಹಳವಾಗಿ ಮಾಡಿದ್ದಾನೆ. ಈ ಮೂವರೂ ಒಂದೇ ಅವತಾರವೆಂದು ಮಾಧ್ವರಭಾವನೆ. ಅಲ್ಲದೆ

‘ಮಧ್ವಮತಾಬ್ಧಿಯೊಳು ಮೀನಾಗಿರಬೇಕು,
ಗುರುಮಧ್ವಶಾಸ್ತ್ರವನು ಓದುವುದೇ ಮಾಂಗಲ್ಯ
ಮಧ್ವಮತಸಿರಿ ಪುರಂದರವಿಠಲ ತತ್ವದ ಸಿದ್ಧಿಯನು ದಯೆಗೈದು ಹೇಳು,
ಹರಿಯ ಸ್ಮರಣೆ ಮಾಡಿರೆ, ಗುರುಮಧ್ವರಮಣನ ಪಾಡಿರೆ’



ಎಂದು ಮುಂತಾಗಿ ಹೇಳಿದ್ದಾರೆ.

ಹಿಂದೂಗಳು ಮಹಮ್ಮದೀಯರ ಆಳ್ವಿಕೆಗೆ ತುತ್ತಾದ ಕಾಲದಲ್ಲಿ ಮತಸಂಸ್ಕಾರವನ್ನು, ಸಮಾಜ ಸಂಸ್ಕಾರವನ್ನು ಮಾಡತೊಡಗಿದರೆಂದು ಲೇಖಕರು ಹೇಳುತ್ತಾರೆ.

ಆವಕುಲವಾದರೇನು ಆವನಾದರೇನು ॥ಪ॥
ಆತ್ಮಭಾವವರಿತ ಮೇಲೆ ॥ಅ॥
ಹಸಿಕಬ್ಬು ಡೊಂಕುವಿರಲು । ಅದರ । ರಸಡೊಂಕುವೇನೋ ॥
ವಿಷಯಾಸೆಗಳನು ಬಿಟ್ಟು । ಹಸನಾದ ಗುರುಭಕ್ತಿ ಮಾಡೋ ॥೧॥

ಎಂದಿದ್ದಾರೆ ಪುರಂದರದಾಸರು. ಬ್ರಾಹ್ಮಣನಲ್ಲದಿದ್ದರೂ ಜ್ಞಾನಿಯಾಗಿದ್ದ ಕನಕದಾಸರಲ್ಲಿ ಪುರಂದರ ದಾಸರಿಗೆ ಬಹಳ ಗೌರವವಿತ್ತು. ವಿವಿಧ ಜಾತಿಯ ಹಿಂದೂಗಳಲ್ಲಲ್ಲದೇ ಮಹಮ್ಮದೀಯರಲ್ಲೂ ಅವರಿಗೆ ವಿಶ್ವಾಸವಿದ್ದಿದ್ದರಿಂದ ತುರುಕರು ಕರೆದರೆ ಉಣಬಹುದಣ್ಣಾ’ ಎಂದು ಹಾಡಿದ್ದಾರೆ.

ಅರಿಯದೆ ಬಂದೆವು ಕಿಮ್ಸನ್ । ಪರಿಹರಿಸಯ್ಯ ಭಮ್ಸನ್
ಮತ್ಸ್ಯಾವತಾರಗೆ ಕಿಮ್ಸನ್ । ಕೂರ್ಮಾವತಾರಗೆ ಭಮ್ಸನ್ ॥

ಎಂದೂ ಹಾಡಿದ್ದಾರೆ. ಮತವಿಷಯಗಳಲ್ಲಿ ಬಹು ಉದಾರವಾದ ಅಭಿಪ್ರಾಯಗಳುಳ್ಳವನಾದ್ದರಿಂದ ಅವರು ಹೀಗೆ ಹೇಳುವುದೇನೂ ಆಶ್ಚರ್ಯವಿಲ್ಲವೆಂದು ಲೇಖಕರು ಹೇಳಿದ್ದಾರೆ. ದಾಸರು ಏಕದೈವವನ್ನು ನಂಬಿದವರು.

ಆದರೆ ಈತನು ವಿಷ್ಣುಭಕ್ತನಾದರೂ ಶಿವದ್ವೇಷಿಯೇನೂ ಅಲ್ಲ. 'ಚಂದ್ರಚೂಡ ಶಿವಶಂಕರ ಪಾರ್ವತಿರಮಣಾ ನಿನಗೆ ನಮೋ ನಮೋ' ಎಂದು 'ಶಿರದಲಿ ರುದ್ರಾಕ್ಷಿಯ ಧರಿಸಿದ ಪರಮವೈಷ್ಣವ ನೀನೇ' ಎಂದು ಶಿವನನ್ನು ಭಜಿಸಿ, ಶಿವನನ್ನೇ ವಿಷ್ಣು ಭಕ್ತನನ್ನಾಗಿ ಮಾಡಿದ್ದಾರೆ.

ಇನ್ನು ಪುರಂದರ ಕೀರ್ತನೆಗಳು ಭಕ್ತಿ ರಸ, ಶಾಂತಿರಸ, ಸಮಾಜ ವಿಡಂಬನೆ, ಆಚಾರ-ವಿಚಾರಗಳ ಕಣಜಗಳು.

'ಭಗವಂತನನ್ನು ಸ್ತುತಿಸುವ ಶ್ರೀಕೃಷ್ಣನ ಲೀಲೆಯನ್ನು ವರ್ಣಿಸುವ 'ಪೋಗದಿರಲೋ ರಂಗ ಬಾಗಿಲಿಂದಾಚೆ' ಇತ್ಯಾದಿ ಮನೋಹರವಾದ ಲೆಕ್ಕ ಇಲ್ಲದಷ್ಟು ಕೃತಿಗಳು ಪುರಂದರರನಿಂದ ರಚಿತವಾಗಿವೆ. ಪರಲೋಕ ದೃಷ್ಟಿಯನ್ನು ನೀಡುವುದರ ಜೊತೆಗೆ ಇಹಲೋಕದ ತುಷ್ಟಿಯನ್ನು ನೀಡುತ್ತವೆ. ಅವು ನವವಿಧ ಭಕ್ತಿಭಾವಗಳನ್ನು ಒಳಗೊಂಡು, ರಸಮಯವಾದ ಕಾವ್ಯದ ಮೆರುಗನ್ನು ಹೊಂದಿದೆ. ಪುರಂದರರನ ಕೃತಿಗಳು. ಆತನ ಉಪದೇಶ ಜನಮನದ ಕೊಳೆಯನ್ನು ತೊಳೆದು ಸಮಾಜ ಜೀವನವನ್ನು ಹಸನಾಗಿ ಮಾಡಿದೆ; ಆತನ ಕವಿತೆ ಕನ್ನಡ ಭಾಷೆಗೆ ತುಷ್ಟಿ ಪುಷ್ಟಿಗಳನ್ನು ನೀಡಿವೆ, ನಟವಿಟ ಗಾಯಕರ ಸ್ವತ್ತೆನಿಸಿದ್ದ ಸಂಗೀತಕ್ಕೆ ಭಕ್ತಿಯುಕ್ತವಾದ ಸಾಹಿತ್ಯವನ್ನು ಒದಗಿಸಿ ಅದಕ್ಕೆ 'ಕರ್ನಾಟಕ ಸಂಗೀತ'ವೆಂಬ ಕೀರ್ತಿಯ ಕೋಡನ್ನು ಮೂಡಿಸಿದೆ. ತ್ಯಾಗರಾಜನು ತನ್ನ ತಾಯಿ ಹಾಡುತ್ತಿದ್ದ ಪುರಂದರದಾಸರ ಕೀರ್ತನೆಗಳನ್ನು ಕೇಳಿ ತನ್ನ ಕೃತಿ ರಚನೆಗೆ ಸ್ಫೂರ್ತಿಯನ್ನು ಪಡೆದನಂತೆ! ಶಿವಶರಣರ ಸಾಲಿನಲ್ಲಿ ಬಸವಣ್ಣ ಹೇಗೋ ಹಾಗೆ, ಹರಿದಾಸರ ಸಾಲಿನಲ್ಲಿ ಪುರಂದರ ದಾಸ ಅಗ್ರಗಣ್ಯ.[೧]

ಪುರಂದರದಾಸರು ಸಂಗೀತ ಸಾಹಿತ್ಯ ಕ್ಷೇತ್ರಗಳೆರಡರಲ್ಲೂ ಅಪಾರ ಯಶಸ್ಸನ್ನು ಪಡೆದು ತಮ್ಮ ಬದುಕು ಹಾಗೂ ಕೃತಿಗಳಿಂದ ವಿದ್ವಾಂಸರ ಮತ್ತು ಜನಸಾಮಾನ್ಯರ ಮನ್ನಣೆಗಳಿಸಿದ ಹರಿದಾಸ ಸಾಹಿತ್ಯ ಪರಂಪರೆ ದಾಸಶ್ರೇಷ್ಠರಲ್ಲೊಬ್ಬರು. ಸಂಗೀತ ಕ್ಷೇತ್ರದಲ್ಲಿ ಇವರ ಸಾಧನೆ, ಸಿದ್ಧಿಗಳ ಫಲವಾಗಿ 'ಕರ್ನಾಟಕ ಸಂಗೀತ ಪಿತಾಮಹ' ಎಂಬ ಬಿರುದಿಗೆ ಪಾತ್ರರಾಗಿದ್ದಾರೆ.[೨]

'ಪುರಂದರದಾಸರ ಬದುಕಿನ ಪ್ರಮುಖ ತಿರುವಿಗೆ ಅವರ ಪತ್ನಿ ಸರಸ್ವತೀ ಬಾಯಿಯವರ ಪ್ರೇರಣೆ, ಸ್ಫೂರ್ತಿ ಇದ್ದಂತೆ ತೋರುತ್ತದೆ. ತಮ್ಮ ಜೀವನಕ್ಕೆ ಉನ್ನತ ಆದರ್ಶವನ್ನು ಒದಗಿಸಿದ ಆಕೆಯನ್ನು ನೆನೆದು ಅಂಥ 'ಹೆಂಡತಿಯ ಸಂತತಿ ಸಾವಿರವಾಗಲಿ' ಎಂದು ದಾಸರು ತಮ್ಮ ಒಂದು ಕೃತಿಯಲ್ಲಿ ಕೃತಜ್ಞತೆ ಸೂಚಿಸಿದ್ದಾರೆ.[೩]

---

೧. ಕನ್ನಡ ಸಾಹಿತ್ಯ ಚರಿತ್ರೆ ತ.ಸು. ಶಾಮರಾಯ - ಪ್ರಕಟಣೆ ಕನ್ನಡ ಸಾಹಿತ್ಯ ಪರಿಷತ್ತು - ೨೦೧೦ ಪು.ಸಂ. ೧೨೭
೨. ಕರ್ನಾಟಕ ಕನ್ನಡ ವಿಶ್ವಕೋಶ - ಮೈ ವಿ.ವಿ. ೧೯೨೯ ಸಂ. ಹಾಮಾ ನಾಯಕ ಪು.ಸಂ. ೯೧೭
೩. ಅದೇ....

ಸಮಾಜ ವಿಮರ್ಶೆಯನ್ನು ಕುರಿತ ಅಪಾರ ಕೀರ್ತನೆಗಳಲ್ಲಿ ಅನೀತಿ, ಅನಾಚಾರ, ಸುಳ್ಳು, ಕಪಟ, ಬೂಟಾಟಿಕೆ, ಡಾಂಭಿಕತೆಗಳನ್ನು ದಾಸರು ಕಟುವಾಗಿ ಟೀಕಿಸಿದ್ದಾರೆ. ಪುರಂದರ ದಾಸರು ಕೀರ್ತನೆಗಳನ್ನಲ್ಲದೇ ಹಲವಾರು ಸುಳಾದಿಗಳನ್ನು ಉಗಾಭೋಗಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ದಾಸರ ದೈವಭಕ್ತಿ, ಸಮಾಜ ಬೋಧನೆ ನಿರರ್ಗಳವಾಗಿ ಹರಿದಿದೆ. ಕೆಲವು ಕೀರ್ತನೆಗಳಲ್ಲಿ ಕೃದೇವರಾಯನ ಕಾಲಾನಂತರ ವಿಜಯನಗರದ ಸಾಮ್ರಾಜ್ಯದ ಸ್ಥಿತಿಯನ್ನು ಕುರಿತು ಹಾಡಿದ್ದಾರೆ. ಸತ್ಯವಂತರಿಗಿದು ಕಾಲವಲ್ಲ ದುಷ್ಟಜನರಿಗೆ ಸುಭಿಕ್ಷಕಾಲ; ಎನ್ನ ಕುಲದವರಿಲ್ಲ ಎನಗೊಬ್ಬರೂ ಹಿತವಿಲ್ಲ ಎಂಬ ಮಾತುಗಳು ಮುಸಲ್ಮಾನರ ದಾಳಿಯ ಅನಂತರದ ಬದಲಾವಣೆಗಳನ್ನು ಕುರಿತು ಇರುವಂತಿದೆ. ಗುರುವ್ಯಾಸರಾಯರನ್ನು ದಾಸರು ತಮ್ಮ ಹಲವಾರು ಕೀರ್ತನೆಗಳಲ್ಲಿ ಹಾಡಿ ಹೊಗಳಿ ತಮ್ಮ ಕೃತಜ್ಞತೆಯನ್ನು ಸಲ್ಲಿಸಿದ್ದಾರೆ. ಸಾಹಿತ್ಯವನ್ನು ಜನಪ್ರಿಯಗೊಳಿಸಿದಂತೆ ಪುರಂದರದಾಸರು ಸಂಗೀತವನ್ನು ಜನಸಾಮಾನ್ಯರ ಹೃದಯಕ್ಕೆ ಮುಟ್ಟಿಸಿದರು. ಸುಲಭವಾದ ಸಂಗೀತಶಿಕ್ಷಣ ಕ್ರಮವನ್ನು ರೂಪಿಸಿದವರೂ ಅವರೇ.[೬]

## ಭಕ್ತಿಭಂಡಾರಿ ಬಸವೇಶ್ವರರು

'ನೆಲವೊಂದೇ ಹೊಲಗೇರಿ ಶಿವಾಲಯಕ್ಕೆ
ಜಲವೊಂದೇ ಶೌಚಾಚಮನಕ್ಕೆ
ಕುಲವೊಂದೇ ತನ್ನ ತಾನರಿದವಂಗೆ
ಫಲವೊಂದೇ ಷಡುದರ್ಶನ ಮುಕ್ತಿಗೆ
ನಿಲುವು ಒಂದೇ ಕೂಡಲಸಂಗಮದೇವಾ ನಿಮ್ಮನರಿದಂಗೆ.[೧]

'ಬಸವಣ್ಣನವರು ೧೨ನೆಯ ಶತಮಾನದಲ್ಲಿದ್ದ ಪ್ರಸಿದ್ಧ ಶಿವಶರಣ, ಪ್ರಸಿದ್ಧ ವಚನಕಾರ, ಸಮಾಜ ಸುಧಾರಕ. ಅಂದು ಕರ್ನಾಟಕದಲ್ಲಿ ನಡೆದ ಧಾರ್ಮಿಕ, ಸಾಮಾಜಿಕ ಮಹಾಕ್ರಾಂತಿಯೊಂದರ ನೇತಾರ'[೨] ಎಂದು ಎಂ.ಆರ್.ಶ್ರೀ. ಅವರು ಹೇಳಿದ್ದಾರೆ. 'ಭಕ್ತಿಭಂಡಾರಿ ಬಸವೇಶ್ವರರು' ಲೇಖನದ ಕರ್ತೃ ಎಂ.ಆರ್. ಶ್ರೀನಿವಾಸಮೂರ್ತಿಯವರು[೩] ಈ ಭಾಗದಲ್ಲಿ ಬಸವಣ್ಣನವರು ಮಾಡಿದ ಸಮಾಜ ಸುಧಾರಣೆಯನನ್ನು ಧರ್ಮ ಸುಧಾರಣೆಯನ್ನು ಲೇಖಕರು ಮುಖ್ಯವಾಗಿ ಪರಿಶೀಲಿಸಿದ್ದಾರೆ. "ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ಬಸವಣ್ಣನವರ ಜನ್ಮಸ್ಥಳ. ಆ ಅಗ್ರಹಾರದ ಅಧಿಪತಿ ಮಾದಿರಾಜ. ಅವನ ಪತ್ನಿ ಮಾದಲಾಂಬೆ. ಇವರು ಬಸವಣ್ಣನವರ ತಂದೆ – ತಾಯಿ. ಬಸವಣ್ಣನವರಿಗೆ ದೇವರಾಜ ಎಂಬ ಅಣ್ಣ, ನಾಗಮ್ಮ ಎಂಬ ಅಕ್ಕ ಇದ್ದರು. ಬಸವಣ್ಣನವರು ಹುಟ್ಟಿದೂರನ್ನು ಬಿಟ್ಟು ಸಂಗಮ ಕ್ಷೇತ್ರಕ್ಕೆ ಹೋದರು. ಅಲ್ಲಿನ ಸ್ಥಾನಪತಿಗಳಾದ ಜಾತವೇದ ಮುನಿ ಅಥವಾ ಈಶಾನ್ಯ ಗುರುಗಳು ಇವರ ವೈಚಾರಿಕ ಬೆಳವಣಿಗೆಗೆ ನೀರು ಗೊಬ್ಬರ ಹಾಕಿ ಅದು ತಿರುಗಬೇಕಾದ ದಿಕ್ಕನ್ನು ನಿರ್ದೇಶಿಸಿದರು."[೪]

---

ಕರ್ನಾಟಕ ಕನ್ನಡ ವಿಶ್ವಕೋಶ – ಮೈ ವಿ.ವಿ. ೧೯೭೯ ಸಂ. ಹಾಮಾ ನಾಯಕ ಪು.ಸಂ. ೯೧೮
ವಚನಧರ್ಮಸಾರ – ಎಂ.ಎಸ್. ಶ್ರೀನಿವಾಸಮೂರ್ತಿ – ಕನ್ನಡ ಸಾಹಿತ್ಯ ಪರಿಷತ್ತು ೨೦೦೯ ಪು.ಸಂ. ೧೬೦
ಕರ್ನಾಟಕ ಕನ್ನಡ ವಿಶ್ವಕೋಶ – ಮೈ ವಿ.ವಿ. ೧೯೭೯ – ಸಂ.ಹಾ.ಮಾ. ನಾಯಕ್ ಪು.ಸಂ. ೯೭೨
ಪ್ರ.ಕ. ೧೯೭೩ – ಅಕ್ಷಯ ಸಂವತ್ಸರ – ೩೦ನೇ (ಕಾಮನ) ಸಂಚಿಕೆ ಸಂಪುಟ ೮ – ಸಂಚಿಕೆ ೪ – ೩ನೇ ಲೇಖನ
ಕರ್ನಾಟಕ ಕನ್ನಡ ವಿಶ್ವಕೋಶ – ಮೈ ವಿ.ವಿ. ೧೯೭೯ – ಸಂ.ಹಾ.ಮಾ. ನಾಯಕ್ ಪು.ಸಂ. ೯೭೨.

ಬಸವಣ್ಣನವರು ಸಮಾಜವನ್ನು ಉದ್ಧಾರ ಮಾಡುವ ಪವಿತ್ರ ಕಾರ್ಯದಲ್ಲಿ ಪ್ರಾಣಾರ್ಪಣ ಮಾಡಿದ್ದರಿಂದ, ಆ ಮಹಾಪುರುಷರ ಚರಿತ್ರೆಯಿಂದ ಪ್ರಪಂಚಕ್ಕೆ ಹೆಚ್ಚು ಉಪಯೋಗವೆಂದು ಎಂ.ಆರ್.ಶ್ರೀ.ಯವರು ಭಾವಿಸುತ್ತಾರೆ. ಏಕೆಂದರೆ ಜನಸಾಮಾನ್ಯರ ಆಚಾರ ವ್ಯವಹಾರಗಳ ತಿದ್ದುಪಡಿಯೂ ಸಮಾಜ ಸುಧಾರಣೆಯೂ ಆಗಬೇಕೆಂದು ಬಸವೇಶ್ವರರು ನಿಶ್ಚಯಿಸಿದ್ದರು; ಆತ್ಮ ಪರಿಶುದ್ಧರೂ ನಡೆನುಡಿಗಳಲ್ಲಿ ಒಂದಾದವರೂ ಸದಾಚಾರಿಗಳೂ ಆದ ಜಂಗಮರ ಕೂಟವನ್ನು ಏರ್ಪಡಿಸಬೇಕೆಂದು ಅವರು ನಿಷ್ಕರ್ಷಿಸಿದ್ದರು; ಜಂಗಮರ ಸ್ಥಾನ ಗೌರವವನ್ನು ಹೆಚ್ಚಿಸಿ ಅವರ ಮೂಲಕ ಮತ ಪ್ರಾಚುರ್ಯ ಕಾರ್ಯವನ್ನು ರಾಷ್ಟ್ರೀಯ ಏಕೀಕರಣವನ್ನು ನೆರವೇರಿಸಬೇಕೆಂದು ಸಂಕಲ್ಪಿಸಿದ್ದರೆಂದು ಎಂ.ಆರ್.ಶ್ರೀ. ಹೇಳಿದ್ದಾರೆ. ಬಸವೇಶ್ವರ ಈ ಕಾರ್ಯದಲ್ಲಿ ಬಂದು ಸೇರಿದ ಮಹಿಮಾ ಪುರುಷರೊಂದಿಗೆ ಕೆಲವು ಸಾಮಾನ್ಯರೂ, ಪುಂಡರೂ ಸೇರಿಕೊಂಡಿದ್ದಂತೆ ಕಾಣುತ್ತದೆ. ಆದರೆ ಲಿಂಗಧಾರಣೆ ಮಾಡಿಕೊಂಡವರೆಲ್ಲರೂ ಶಿವಪಥವನ್ನು ಹಿಡಿದವರಾಗಲಿಲ್ಲ, ಇದನ್ನು ಕಂಡು ಬಸವಣ್ಣನವರು;

'ಒಳಗೆ ಕುಟಿಲ, ಹೊರಗೆ ವಿನಯವಾಗಿ
ಭಕ್ತರೆನಿಸಿರೊಂಬವರ ಬಲ್ಲನೊಲ್ಲನಯ್ಯ ಲಿಂಗವು
ಅವರು ಶಿವಪಥಕ್ಕೆ ಸಲ್ಲರು, ಸಲ್ಲರಯ್ಯ?
ಒಳಹೊರಗೊಂದಾಗದವರಿಗೆ ಅಳಿಯಾಸೆದೋರಿ
ಬಿಸಾಡುವನವರ ಜಗದೀಶ ಕೂಡಲ ಸಂಗಮದೇವ' ಎನ್ನುತ್ತಾರೆ.

ಬಸವೇಶ್ವರರ ಆಶ್ರಯದಲ್ಲಿದ್ದ ಕೆಲವು ಜಂಗಮರು ತಾವೇ ದಂಡಾಧೀಶರಂತೆ ಗರ್ವವುಳ್ಳಾಗಿದ್ದರೆಂದು ತೋರುತ್ತದೆ. ಅವರಿಗೆ ಬಸವೇಶ್ವರರ ದೆಸೆಯಿಂದ ಪ್ರತಿಷ್ಠೆ ಬಂದುದು ಸ್ವಲ್ಪ ಹೆಚ್ಚಾಯಿತು. ತಮ್ಮ ಅನುಯಾಯಿಗಳು ದುರ್ವ್ಯವಹಾರಿಗಳಾದರೆ, ಅಹಂಕಾರಿಗಳಾದರೆ ಜನಗಳು ಹೇಗೆ ಗೌರವಿಸುವರೆಂದು ಬಸವೇಶ್ವರರು ಚಿಂತಿತರಾಗುತ್ತಿದ್ದರು. ಸದಾಚಾರ, ಸದ್ವರ್ತನೆಗಳೇ ಶ್ರೇಯಸ್ಸಿಗೆ ಮೂಲವೆಂದು ಅವರು ನಂಬಿದ್ದರು. ತಿಳಿಹೇಳಿದರೂ ಅವರಿಗೆ ಕೋಪ ಬರುತ್ತಿತ್ತು. ಆದ್ದರಿಂದ ಅವರನ್ನು ಸರಿದಾರಿಗೆ ತರಲು ಬಸವೇಶ್ವರರು

'ತಂದೆ ಮಕ್ಕಳಿಗೆ ಬುದ್ಧಿಯ ಹೇಳುವಲ್ಲಿ
ತಪ್ಪಿಂಗೆ ಮುನಿವನಲ್ಲದೆ ಪ್ರಾಣಕ್ಕೆ ಮುನಿಯ,
ಲಿಂಗವಂತನು ಲಿಂಗವಂತರಿಗೆ ಬುದ್ಧಿಯ ಹೇಳುವಲ್ಲಿ,
ಅವಗುಣಕ್ಕೆ ಮುನಿವನಲ್ಲದೆ ಲಾಂಛನಕ್ಕೆ ಮುನಿಯ
ಲಿಂಗಭಕ್ತನು ಲಿಂಗವಂತರಿಗೆ ಬುದ್ಧಿಯ ಹೇಳಿದರೆ,
ಮಚ್ಚರಿಸುವರ ಮೆಚ್ಚ ಕೂಡಲಸಂಗಮದೇವಾ' ಎಂದು.

ಸಮಾಧಾನ ಪಡಿಸುತ್ತಿದ್ದರು. ಕಪಟ ಜಂಗಮರನ್ನು ತಿದ್ದುವುದು ಈಶ್ವರನ ಕೆಲಸ. ಇದ್ದ ಹಾಗೆ ಒಪ್ಪಿಕೊಳ್ಳುವುದು ಭಕ್ತನ ಕರ್ತವ್ಯ ಎಂದು ಮುಂತಾಗಿ ಬಸವೇಶ್ವರರ ಚಿತ್ತವೃತ್ತಿಯು ಮಾರ್ಪಟ್ಟು ಜಂಗಮ ಸ್ವೀಕಾರವಾಯಿತು.

ಆಕಾರ ಮನಸ್ಸಿನಲ್ಲಿ ಏನೇನಿಹುದೆಂದರಿಯೆ,
ಬಳ್ಳಿಹರೆಂದೆನಲಮ್ಮೆ ಹೊಲ್ಲಹರೆಂದೆನಲಮ್ಮೆ.
ಶಿವಭಕ್ತರಾದ ಕಾರಣ ಜಂಗಮವೇ ಲಿಂಗ ಕೂಡಲ ಸಂಗಮದೇವಾ

ಎಂದು ಬಸವೇಶ್ವರರು ಹೇಳಿಕೊಂಡರು. ಕಡೆಗೆ ಕಳ್ಳನೊಬ್ಬನು ಬಂದು ಹೆಂಡತಿಯ ಒಡವೆಗಳನ್ನು ಅಪಹರಿಸುತ್ತಿದ್ದರೂ ಜಂಗಮ ಲಾಂಛನದಾರಿಯಾಗಿದ್ದರೆ ಬಸವೇಶ್ವರರು ಸುಮ್ಮನಿರುತ್ತಿದ್ದರು. 'ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದೊಡೆ ಕೂಡಲಸಂಗದೇವನಲ್ಲದೆ ಮತ್ತಾರೂ ಅಲ್ಲ' ಎಂದು ತಾವೇ ನೀಲಾಂಬಿಕೆಯ ಸಕಲಾಭರಣಗಳನ್ನು ತೆಗೆಸಿಕೊಟ್ಟರೆಂದು ಸಿಂಗರಾಜಪುರಾಣದ ೧೦ನೇ ಸಂಧಿಯಲ್ಲಿ ವರ್ಣಿತವಾಗಿದೆಯೆಂದು ಎಂ.ಆರ್. ಶ್ರೀ. ಹೇಳಿದ್ದಾರೆ. ಬಸವೇಶ್ವರರು ಚೋರ ಜಂಗಮರನ್ನು ವಿಟ ಜಂಗಮರನ್ನು, ಮಿಂಡ ಜಂಗಮರನ್ನೂ ಸಭ್ಯರೊಡನೆ ಒಂದಾಗಿ ಮಾಡಿದ್ದು ಬಸವೇಶ್ವರರ ಒಂದು ದೋಷವೆಂದು ತಾವು ಪರಿಗಣಿಸುವುದಿಲ್ಲವೆಂದು ಲೇಖಕರು ಹೇಳುತ್ತಾರೆ. ಕಾರಣ ಮನಸ್ಸಿನಲ್ಲಿ ಹೊಕ್ಕಿರುವ ತಿರಸ್ಕಾರ ಬುದ್ಧಿಯನ್ನು ಜಿಗುಪ್ಸೆಯ ಭಾವವನ್ನು ಜಯಿಸಿಕೊಂಡು ಸಮಾನತೆಯನ್ನು ಸಾಧಿಸುವುದು ಎಲ್ಲರಿಗೂ ಸಾಧ್ಯವಿಲ್ಲ. ಅದು ಆತ್ಮಶುದ್ಧಿ ಹಾಗೂ ಆತ್ಮೋನ್ನತಿಗಾಗಿ ಎದುರಾದ ಸಂದಿಗ್ಧ ವಿಚಾರ. ಹೀಗೆ ಬದಲಾಯಿಸುವುದು ಸಾಧ್ಯವೆಂದು ಮನಶ್ಶಾಸ್ತ್ರದಲ್ಲಿಯೂ ಅಂಗೀಕೃತವಾಗಿದೆ. ಒಬ್ಬರು ಮಹಾತ್ಮರ ದೆಸೆಯಿಂದಲೇ ಲಕ್ಷೋಪಲಕ್ಷ ಜನರು ಉದ್ಧಾರವಾಗುತ್ತಾರೆ. ದುಷ್ಟರು ಸಭ್ಯರಾಗುತ್ತಾರೆ. ಹಾಗಾಗಿ ಬಸವೇಶ್ವರರು ಜಂಗಮವೇ ಲಿಂಗವೆಂದು ದೃಢಮನಸ್ಸಿನಿಂದ ಸಾರಿದ್ದು ಅವರ ಕರ್ತವ್ಯ, ಅವರ ಫಲಾಫಲಗಳು ಈಶ್ವರಾಧೀನ. ಅದಕ್ಕೇ 'ತೊತ್ತಿಗೆ ತೊತ್ತುಗೆಲಸವಲ್ಲದೇ ಅರಸಿನ ಸುದ್ದಿ ನಮಗೇತಕಯ್ಯ' ಎಂದು ಬಸವೇಶ್ವರರು ಹೇಳಿದ್ದಾರೆ.

ಇನ್ನು ಇವರ ಕಲ್ಯಾಣ ಕ್ರಾಂತಿಯಿಂದ ಸಹಸ್ರ ಸಹಸ್ರಾರು ಜನರು ಲಿಂಗವಂತರಾದರು. ಉತ್ಸಾಹದಿಂದ ಜನಗಳು ವೀರಶೈವೋದೇಶವನ್ನು ಕೈಕೊಂಡಾಗ ಒಂದೇ ಸಂಸಾರದಲ್ಲಿ ಗಂಡಸೊಂದು ರೀತಿ, ಹೆಂಗಸಿನ್ನೊಂದು ರೀತಿ ವರ್ತಿಸುತ್ತಿದ್ದರು. 'ವೀರಶೈವವನ್ನು ಸ್ವೀಕರಿಸಿದ ಮೇಲೆಯೂ ಪೂರ್ವ ಸಂಸ್ಕಾರಕ್ಕೆ ಅಂಟಿಕೊಂಡಿರುವವರನ್ನು ಕುರಿತು 'ಪರುಷ ಮುಟ್ಟಿದ ಬಳಿದ ಕಬ್ಬುನವಾಗದು ನೋಡಾ' ಎಂದು ಗದರಿಸುತ್ತಾನೆ. ತಲೆ ಬೋಳಾದರೂ ಮನ ಬೋಳಾಗದ ಜಂಗಮರನ್ನು ಭಕ್ತರಲ್ಲದ ವೇಷಧಾರಿಗಳನ್ನೂ ಬಹಿರಾಡಂಬರದ ಅಟಮಟ ಭಕ್ತರನ್ನೂ, ಆತ ಕಟುವಾಗಿ ಟೀಕಿಸುತ್ತಾನೆ. 'ಏತ ತಲೆವಾಗಿದರೇನು, ಗುರು ಭಕ್ತನಾಗಬಲ್ಲುದೇ? ಇಕ್ಕೂಳ ಕೈ ಮುಗಿದರೇನು? ಭೃತ್ಯಾಚಾರಿಯಾಗಬಲ್ಲುದೆ? ಗಿಳಿಯೋದಿದರೇನು, ಲಿಂಗವೇದಿಯಾಗಬಲ್ಲುದೇ?' ಎಂದು ಕೇಳುತ್ತಾನೆ. ಗುರುಲಿಂಗ ಜಂಗಮದಲ್ಲಿ ಎರಡರಿಯದ ಭಕ್ತಿಯನ್ನು ಬೆಳೆಸಿಕೊಂಡಿದ್ದ ಬಸವಣ್ಣ ಅದನ್ನೇ ಜನರಿಗೆ ಬೋಧಿಸಿದ. ಬಸವಣ್ಣನು ನಿಷ್ಕಪಟಿಯಾದ ಸದಾಚಾರಿ, ಲಿಂಗನಿಷ್ಠ, ಭಕ್ತಿಭಂಡಾರಿ, ಆದರೆ ಇದಕ್ಕಾಗಿ ಜನ ತನ್ನನ್ನು ಹೊಗಳುವುದು ಆತನಿಗೆ ಅಸಹ್ಯಕರ' ಎನ್ನವರೊಲಿದು ಹೊನ್ನಶೂಲದಲಿಕ್ಕಿದರೆನ್ನ ಹೊಗಳಿ, ಹೊಗಳಿ' ಎಂದು ಆತ ಅಕ್ಕಸಪಡುತ್ತಾನೆ.'[೫]

ಕೆಲವರು ಬಾಯಲ್ಲಿ ಈಶ್ವರನಾಮವನ್ನು ಹೇಳುತ್ತಿದ್ದರೂ ಮನದಲ್ಲಿ ಮಾರಿ ಸ್ಮರಣೆಯನ್ನು ಮಾಡುತ್ತ, ಮರೆಯಲ್ಲಿ ಪ್ರಾಣಿಬಲಿಯನ್ನು ಕೊಡುತ್ತಿದ್ದರು.

---

ಕನ್ನಡ ಸಾಹಿತ್ಯ ಚರಿತ್ರೆ - ತ.ಸು. ಶಾಮರಾಯ - ಕನ್ನಡ ಸಾಹಿತ್ಯ ಪರಿಷತ್ತು - ೧೦೧೦ ಪು.ಸಂ. ೫೪, ೫೫

'ಉಣಲುಡಲು ಮಾರಿಯಲ್ಲದೆ ಕೊಲಲು ಕಾಯಲು ಮಾರಿಯೆ?
ತನ್ನ ಮಗನ ಜನವೊಯ್ಯುವಲ್ಲಿ, ಅಂದೆತ್ತ ಹೋದಲೋ ಮಾರಿಕವ್ವೆ?
ಇವರು ಕಾವರೆ, ಕೊಲುವರೆ? ನಮ್ಮ ಕೂಡಲ ಸಂಗಯ್ಯನಲ್ಲದೆ
ಮತ್ತೊಂದು ದೈವವಿಲ್ಲ, ದೈವವಿಲ್ಲ'

ಎಂದು ಹಿತೋಪದೇಶ ಮಾಡಿದರು. ಇವುಗಳಿಂದ ಜನಸಾಮಾನ್ಯರಲ್ಲಿದ್ದ ದುರಾಚಾರಗಳು ಮಾಯವಾಗಿ ಸಮಾಜದ ಉದ್ಧಾರವು ಮತನಿಯಮಗಳಿಂದಲೂ ಮತಾಚರಣೆಯಿಂದಲೂ ಕೈಗೂಡುವಂತಾಯಿತು. ಹೀಗೆ ಸಮಾಜದಲ್ಲಿ ಐಕಮತ್ಯವೂ ಉಂಟಾಗುವಂತೆ ಬಸವೇಶ್ವರರು ಪ್ರಯತ್ನಪಟ್ಟರು. ಬಸವೇಶ್ವರರು ಜಾತಿಭೇದಗಳನ್ನು ಗಣಿಸದೆ ಲಿಂಗಮತರೆಲ್ಲಕುಲಜರು ಎಂದು ಭಾವಿಸಿದರು. 'ಸರ್ವಂ ಶಿವಮಯ ಜಗತ್', ಪರಮಾತ್ಮನು ಎಲ್ಲರಲ್ಲೂ, ಎಲ್ಲೆಲ್ಲಿಯೂ ಇದ್ದಾನೆಂದು ಸಾರಿದರು. ಆಚಾರದಿಂದ ಜಾತಿ ನಿರ್ಣಯವಾಗಬೇಕೆಂದು ತೀರ್ಮಾನಿಸಿದರು. ಎಲ್ಲರಿಗೂ ಸಮಾನ ಹಕ್ಕುಗಳಿರಬೇಕೆಂದು ಪ್ರತಿಪಾದಿಸಿದರು. ಪೂರ್ವಸಂಪ್ರದಾಯದವರಿಂದ ಬಸವೇಶ್ವರರಿಗೆ ಬಹಿಷ್ಕಾರವೇ ಆಯಿತು.

'ಆರು ಮುನಿದು ಎಮ್ಮನೇನು ಮಾಡುವರು?
ಊರು ಮುನಿದು ಎಮ್ಮನೆಂತು ಮಾಡುವರು?
ನಮ್ಮ ಕುನ್ನಿಗೆ ಕೂಸ ಕೊಡಬೇಡ. ನಮ್ಮ
ಸೊಣಗಂಗೆ ತಳಿಗೆಯಲ್ಲಿಕ್ಕಬೇಡ, ಆನೆಯ ಮೇಲೆ
ಹೋಹವನ ಶ್ವಾನ ಮುಟ್ಟಬಲ್ಲುದೆ? ಕೂಡಲಸಂಗಮದೇವ.
ರುಳ್ಳನ್ನಕ್ಕರ ನಮಗೇನಯ್ಯ? ಎಂದು ಪ್ರತಿಕ್ರಿಯಿಸುತ್ತಾರೆ.

ಸಮಾಜ ನಿಯಮಗಳು ಈಗಿನ ಕಾಲಕ್ಕಿಂತ ನೂರು ಮಡಿ ಬಿಗಿಯಾಗಿದ್ದಾಗ, ಮತಕಟ್ಟಳೆಗಳ ಬಲೆಯಲ್ಲಿ ಸಿಕ್ಕಿಬಿದ್ದಿದ್ದಾಗ, ಜಾತಿ ಭ್ರಷ್ಟರೂ, ಮತಭ್ರಷ್ಟರೂ ಆಗುವುದಕ್ಕೆ ಜನಗಳು ಸಾವಿರಪಾಲು ಹೆಚ್ಚು ಹೆದರಿ ಸಾಯುತ್ತಿದ್ದಾಗ ಬಸವೇಶ್ವರರು ಮುಂದೆ ಬಂದು ಪತಿತೋದ್ಧಾರವನ್ನು ಮಾಡಿ ಸಮಾನವಾದ ಹಕ್ಕು ಬಾಧ್ಯತೆಗಳನ್ನು ಕಲ್ಪಿಸಿಕೊಟ್ಟರು ಎಂದು ಎಂ.ಆರ್. ಶ್ರೀ. ಹೇಳಿದ್ದಾರೆ.

ಬ್ರಾಹ್ಮಣ ಧರ್ಮವನ್ನು ಅವರು ನಡೆಸುತ್ತಿದ್ದ ಯಜ್ಞಯಾಗಾದಿಗಳನ್ನು ನೋಡಿ ವೀರಶೈವವು ಉತ್ಕೃಷ್ಟವಾದುದೆಂದು ತಿಳಿಯಹೇಳಿದರು.

'ಕೊಲುವನೇ ಮಾದಿಗ, ಹೊಲಸು ತಿಂಬುವನೇ ಹೊಲೆಯ
ಕುಲವೇನೋ, ಆವಂದಿರ ಕುಲವೇನೋ? ಸಕಲ

ಜೀವಾತ್ಮರಿಗೆ ಲೇಸನೇ ಬಯಸುವ ನಮ್ಮ
ಕೂಡಲಸಂಗನ ಶರಣರೆಲ್ಲ ಕುಲಜರು' ಎಂದು ಸಾರಿದರು.

ಸುಮಾರು ೧೨ ವರ್ಷಗಳ ಕಾಲ ಕಲ್ಯಾಣವು ಬಸವಣ್ಣನವರ ಕಾರ್ಯಕ್ಷೇತ್ರವಾಗಿತ್ತು. ಈ ಅಲ್ಪಾವಧಿಯಲ್ಲಿ ಅವರು ಜನಜೀವನದ ಮೇಲೆ ಬೀರಿದ ಪ್ರಭಾವ ಅದ್ವಿತೀಯವಾದುದು. ಬಹುಶಃ ಹಿಂದಾವ ಧಾರ್ಮಿಕ ಪುರುಷರೂ, ಪ್ರವಾದಿಗಳೂ ಈ ಮಾರ್ಗದಲ್ಲಿ ಸಾಧನೆಯನ್ನುಂಟು ಮಾಡಿರಲಿಲ್ಲ. ಬಸವಣ್ಣನವರು ಇಡೀ ಯುಗವನ್ನು ಎಚ್ಚರಿಸಿದ ಯುಗಪ್ರವರ್ತಕ ಶಕ್ತಿಯಾಗಿ ಪರಿಣಮಿಸಿದರು. ಲೌಕಿಕ ಅಧಿಕಾರದಲ್ಲಿದ್ದೂ ಆಂತರಿಕವಾಗಿ ಮಹಾನುಭಾವಿಯಾದುದು ಇವರ ಅಂತರಂಗದ ಕಥೆ, ಇವರ ವಚನಗಳಲ್ಲಿ ಭಾವಗೀತೆಯ ತೀವ್ರತೆ ಹಾಗೂ ಮಧುರತೆಗಳು ಕಂಡು ಬರುತ್ತವೆ. ಇಹಲೋಕದ ಜೀವನವನ್ನು ಸಾಧನೆಯ ಮಾರ್ಗಕ್ಕೆ ಅಳವಡಿಸಿಕೊಳ್ಳುವುದೇ ಬಸವಣ್ಣನವರು ಬೋಧಿಸಿದ ಮುಖ್ಯ ತತ್ವ. ಅವರ ಕಾಯಕದ ಕಲ್ಪನೆ ಸಮಗ್ರ ಜೀವನ ದರ್ಶನವನ್ನು ಒಳಗೊಳ್ಳುತ್ತದೆ. ಅವರ ವೈಚಾರಿಕ ದೃಷ್ಟಿ ಬೌದ್ಧಿಕ ವಿಕಾಸಕ್ಕೆ, ಧಾರ್ಮಿಕ ಸ್ವಾತಂತ್ರಕ್ಕೆ ಆಧ್ಯಾತ್ಮಿಕ ಪ್ರಗತಿಗೆ ತಳಹದಿಹಾಗಿದೆ.[೬]

'ಬಸವಣ್ಣನವರು ಹೇಳುವ 'ನುಡಿದರೆ ಮುತ್ತಿನ ಹಾರದಂತಿರಬೇಕು, ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು. ನುಡಿದರೆ ಸ್ಫಟಿಕದ ಶಲಾಕೆಯಂತಿರಬೇಕು. ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು' ಎಂಬ ಆದರ್ಶಕ್ಕೆ ಆತನ ನುಡಿಗಳೇ ಉದಾಹರಣೆಯಾಗಿವೆ. ಅಹುದು, ಲಿಂಗ ಮೆಚ್ಚಿ ಅಹುದು ಎಂದುದರಿಂದಲೇ ಬಸವಣ್ಣ ಅಮೃತಪುತ್ರನಾದುದು, ಪವಾಡ ಪುರುಷನಾದುದು, ಮಾನವದೇನಾದುದು, ಆತನ ವಚನಗಳಲ್ಲಿ ಧರ್ಮ ಕಾವ್ಯಧರ್ಮಗಳು ಸಮರಸವಾಗಿ ಬೆರೆತು ಹೃದಯಕ್ಕೆ ಆನಂದವನ್ನು ಆತ್ಮಕ್ಕೆ, ಶ್ರೇಯಸ್ಸನ್ನೂ ಒದಗಿಸುತ್ತವೆ [೭] ಎಂಬುದು ತ.ಸು. ಶಾಮರಾಯರ ಅಭಿಪ್ರಾಯವಾಗಿದೆ.

ನೂತನವಾಗಿ ಸೇರಿಕೊಂಡವರಿಗೆ ವೀರಶೈವರಲ್ಲಿ ಎಳ್ಳಷ್ಟು ಅತೃಪ್ತಿಯಾಗಲು ಅವಕಾಶವಾಗಲಿಲ್ಲ. ತನ್ನ ಅನುಯಾಯಿಗಳಿಗೆ ಸ್ವಮತಾಧಿಕ್ಯದಲ್ಲಿ ನಂಬಿಕೆಯೂ ಪರಮತಹೀನಕೆಯಲ್ಲಿ ನಿಶ್ಚಯವೂ ಬಂದಾಗ 'ವರ್ಣನಾಂ ಬ್ರಾಹ್ಮಣೋ ಗುರುಃ ಎಂಬುದು ಹುಸಿ, ವರ್ಣನಾಂ ಗುರು ನಮ್ಮ ಕೂಡಲ ಸಂಗನ ಶರಣ ಮಹಾಜನರು' ಎಂದು ಸಾರಿ ವೀರಶೈವ ಧರ್ಮವನ್ನು ಹರಡಿದರೆಂದು ಎಂ.ಆರ್.ಶ್ರೀ. ಭಕ್ತಿಭಂಡಾರಿ ಬಸವಣ್ಣನವರ ಸಾಧನೆಗಳನ್ನು ವಿವರಿಸಿದ್ದಾರೆ.

ಮಹಾತ್ಮ ಬಸವಣ್ಣನವರು ಕಟ್ಟಬಯಸಿದ್ದು ಸರ್ವಶೋಷಣೆಗಳಿಂದಲೂ ಮುಕ್ತವಾದ, ಸ್ವಾತಂತ್ರ್ಯ, ಸಮಾನತೆ ಸೌಹಾರ್ದಗಳ ಅಡಿಗಲ್ಲಿನ ಮೇಲೆ ನಿಂತ, ಸರ್ವೋದಯ ನಿಷ್ಠವಾದ ಒಂದು ಆದರ್ಶ ಸಮಾಜವನ್ನು. ಆಧುನಿಕ ಕಾಲದಲ್ಲಿ ವಚನ ಚಳವಳಿ ಮತ್ತು ಅದರ ತತ್ವಗಳನ್ನು ಒಳಗೊಂಡ ವೀರಶೈವ ಧರ್ಮಕ್ಕೆ ವಿಶೇಷ ಮನ್ನಣೆ ದೊರಕಿದ್ದೇಕೆಂದರೆ ವಚನಗಳಲ್ಲಿ ಕಂಡುಬರುತ್ತಿದ್ದ ಉದಾರವಾದ ಮತ್ತು ಮಾನವತಾವಾದದ ಚಿಂತನೆಗಳಿಂದಾಗಿ.

ಸಾಮಾಜಿಕ ಚಿಂತನೆಗಳಿಗೆ ಪ್ರಬುದ್ಧ ಕರ್ನಾಟಕದ ಪ್ರತಿಕ್ರಿಯೆಯನ್ನು ಹೀಗೆ ಗುರುತಿಸಬಹುದು :

೧. ಲೋಕದಲ್ಲಿ ದುರ್ಬಲ ವರ್ಗದವರ ಮೇಲೆ ಬಲಾಢ್ಯರ ದಬ್ಬಾಳಿಕೆಯು ನಿರಂತರವಾಗಿ ನಡೆಯುತ್ತಾಬಂದಿದೆ. ಇದರ ಮೂಲವು ಆರ್ಥಿಕ ಅಸಮಾನತೆ ಎಂಬುದು ನಿಡುಗಾಲದ ಸತ್ಯ. ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ನಾಟಕದ ಸಾಂಸ್ಕೃತಿಕ ಸಂಕಥನಗಳಲ್ಲಿ ಸಾಮಾಜಿಕ ಪುನರ್‌ರಚನೆಯು ಒಂದು ಪ್ರಮುಖ ನೆಲೆ.

---

೬ ಕರ್ನಾಟಕ ಕನ್ನಡ ವಿಶ್ವಕೋಶ – ಮೈ ವಿ.ವಿ. ೧೯೭೯ – ಸಂ.ಹಾ.ಮಾ. ನಾಯಕ್ ಪು.ಸಂ. ೬೭೦, ೬೭೩

೭ ಕನ್ನಡ ಸಾಹಿತ್ಯ ಚರಿತ್ರೆ – ತ.ಸು. ಶಾಮರಾಯ – ಕನ್ನಡ ಸಾಹಿತ್ಯ ಪರಿಷತ್ತು – ೧೦೧೦ ಪು.ಸಂ. ೫೭

೨. ಸರ್. ಎಂ. ವಿಶ್ವೇಶ್ವರಯ್ಯ ಅವರ ಜೀವನದ ಬಗ್ಗೆ ರೂಪುಗೊಳ್ಳುವ ಸಂಕಥನವು ಪ್ರಬುದ್ಧ ಕರ್ನಾಟಕದ ಮೂಲಕ ಆದರ್ಶ ಆಧುನಿಕ ಪ್ರಜೆಯನ್ನು ಕಟ್ಟುತ್ತಿದೆ.

೩. ವ್ಯಕ್ತಿ ಮತ್ತು ಸಮಾಜದ ನಡುವೆ ಅಗತ್ಯವಾಗಿ ಇರಬೇಕಾದ ಅವಿನಾಭಾವ ಸಂಬಂಧದ ಮೌಲ್ಯವನ್ನು ಪ್ರಬುದ್ಧ ಕರ್ನಾಟಕ ಮುಂದಿಡುತ್ತದೆ.

೪. ಪಾರಂಪರಿಕ ಸಾಮಾಜಿಕ ವ್ಯವಸ್ಥೆಯನ್ನು ತಾರ್ಕಿಕವಾಗಿ ಪ್ರಶ್ನಿಸಿದ ಆಧುನಿಕ ಪೂರ್ವಕಾಲಘಟ್ಟದ ಕಥನಕಾರರ ತತ್ವಗಳನ್ನು ಪ್ರಬುದ್ಧ ಕರ್ನಾಟಕವು ಪುನರ್ರಚಿಸುತ್ತಿತ್ತು.

೫. ಉದಾರವಾದ ಮತ್ತು ಮಾನವತಾವಾದದ ಮೌಲ್ಯಗಳನ್ನು ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ನಾಟಕವು ಗಟ್ಟಿಯಾಗಿ ಪ್ರತಿಪಾದಿಸುತ್ತಿತ್ತು.

# ೫. ಪ್ರಬುದ್ಧ ಕರ್ನಾಟಕದಲ್ಲಿನ ಮಹಿಳೆಯ ಬಗೆಗಿನ ಸಂಕಥನಗಳು

ಕಂಗಳ ಮುಂದಣ ಬೆಳಗಕಾಣದೆ ಕಂಡ ಕಂಡವರ ಹಿಂದೆ ಸರಿದು
ಇನ್ನ ಬೇರೆ ಕಂಡೆನೆಂಬ ಭಂಗಿತರ ನೋಡಾ!
ತನ್ನಲ್ಲಿ ತಾ ಸುಯಿದಾನಿಯಾಗಿ ನೋಡಲರಿಯದೆ,
ಭಿನ್ನಗಣ್ಣಲ್ಲಿ ನೋಡಿಹೆನೆಂದು ತಮ್ಮ ಮರೆದು
ಇನ್ನುಂಟೆಂದು ಅರಸುವ ಅಣ್ಣಗಳಿರಾ,
ನೀವು ಕೇಳಿರೆ,
ಮನವು ಮಹದಲ್ಲಿ ನಿಂದುದೇ ಲಿಂಗ;
ಕರಣುಗಳರಿತುದೇ ಕಂಗಳ ಮುಂದಣ ಬೆಳಗು,
ಇದನರಿಯದೆ,
ಮುಂದೆ ಘನವುಂಟೆಂದು ತೊಳಲಿ ಬಳಲಿ ಅರಸಿಹೆನೆಂದು
ಅರೆಮರುಳಾಗಿ ಹೋದರಯ್ಯ ನಿಮ್ಮ ನೆಲೆಯನರಿಯದೆ
ಅಪ್ಪಣ್ಣ ಪ್ರಿಯ ಚೆನ್ನ ಬಸವಣ್ಣ.[೧]

ಆಯಾ ಕಾಲಘಟ್ಟದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ವಿನ್ಯಾಸಗಳಿಗೆ ಅನುಗುಣವಾಗಿ ಲಿಂಗ ವ್ಯವಸ್ಥೆಯಲ್ಲೂ ಬದಲಾವಣೆಗಳು ಉಂಟಾಗುತ್ತಿರುತ್ತವೆ. ಈ ಬದಲಾವಣೆಗಳನ್ನು ರಚನೆಗಳೆಂದು ಕರೆಯಲಾಗಿದೆ. ಸಾಮಾನ್ಯವಾಗಿ ಎಲ್ಲಾ ದೇಶಗಳಲ್ಲೂ, ಎಲ್ಲಾ ಕಾಲಘಟ್ಟಗಳಲ್ಲೂ ಅಧಿಕಾರ ವರ್ಗ, ಯಾಜಮಾನ್ಯ ವರ್ಗ ಮತ್ತು ಬಂಡವಾಳಶಾಹಿ ವರ್ಗ ಈ ರೀತಿಯ ರಚನೆಗಳನ್ನು ರಚಿಸುತ್ತಿರುತ್ತದೆ.

ಆಧುನಿಕ ಬಂಡವಾಳಶಾಹಿ ವ್ಯವಸ್ಥೆಗೆ ಹೊಂದುವಂತಹ ಮಹಿಳೆಯನ್ನು ಹೇಗೆ ರಚಿಸಲಾಗುತ್ತಿತ್ತು ಎನ್ನುವುದನ್ನು ಗ್ರಾಮ್ಷಿ ಹೀಗೆ ವಿವರಿಸಿದ್ದಾನೆ: 'ಹೆಂಗಸರು ದೈಹಿಕವಾಗಿ ಮತ್ತು ಮಾನಸಿಕವಾಗಿ ದುರ್ಬಲರು; ಮನೆಯ ಹೊರಗಿನ ವ್ಯಾವಹಾರಿಕ ಜಗತ್ತನ್ನು ನಿಭಾಯಿಸಲು ಅಸಮರ್ಥರು; ಅವರು ಮನೆವಾಳ್ತೆಯನ್ನು ನಿಭಾಯಿಸಿ ಗಂಡಸಿಗೆ ದೈಹಿಕ ಹಾಗೂ ಮಾನಸಿಕ ಸುಖ ನೀಡಿ, ಗಂಡಸು ಸಮಚಿತ್ತದಿಂದ ಲೌಕಿಕ ವ್ಯವಹಾರಗಳನ್ನು ನಡೆಸಿಕೊಂಡು ಹೋಗುವುದಕ್ಕೆ ಅನುಕೂಲ ಮಾಡಿಕೊಡಬೇಕು ಎಂಬ ಮೌಲ್ಯಗಳು ಊಳಿಗಮಾನ್ಯ ವ್ಯವಸ್ಥೆಯಲ್ಲಿ ರೂಢಿಗೆ ಬಂದವು ಎಂದಿಟ್ಟುಕೊಳ್ಳೋಣ. ಈ ಮೌಲ್ಯಗಳು ಎಷ್ಟು ಗಟ್ಟಿಯಾಗಿ ಜನರ ಮನಸ್ಸಿನಲ್ಲಿ ಕೂತಿರುತ್ತದೆ ಎಂದರೆ, ಹೆಂಗಸರನ್ನು ಸೇರಿಸಿಯೇ ಜನರು ಈ ಲಿಂಗಭೇದ ಪ್ರಕೃತಿ ಸಹಜವಾದದ್ದು ಎಂದೇ ನಂಬುತ್ತಾರೆ; ಈ ಮೌಲ್ಯಗಳನ್ನು ಉಲ್ಲಂಘಿಸುವವರು ಅತಿ ಉಗ್ರ ಶಿಕ್ಷೆಗೆ ಗುರಿಯಾಗುವುದು ನ್ಯಾಯ ಸಮ್ಮತ ಎಂದೇ ಜನರು ನಂಬುತ್ತಾರೆ.'[೨]

---

೧. ಹಡವದಪ್ಪಣ್ಣಯ್ಯನ ಪುಣ್ಯ ಸ್ತ್ರೀಲಿಂಗಮ್ಮನ ವಚನ – ಶಿವಶರಣೆಯರ ವಚನಗಳು ಸಂಪುಟ – ಸಂಪಾ – ಡಾ. ವೀರಣ್ಣ ರಾಜೂರ್ – ಕನ್ನಡ ಸಂಸ್ಕೃತಿ ಇಲಾಖೆ ೧೯೯೫ – ಪು.ಸಂ. ೨೨೦.

೨. ಕೆ. ಫಣಿರಾಜ್ – ಆಂಟೋನಿಯೊ ಗ್ರಾಮ್ಷಿ – ಅಭಿನವ ಪ್ರಕಾಶನ – ೨೦೦೩ – ಪು.ಸಂ. ೪೩.

ವಸಾಹತು ಆಧುನಿಕತೆಯ ಕಾಲಘಟ್ಟದಲ್ಲೂ ಮಹಿಳೆಯ ರಚನೆ ಪಾರಂಪರಿಕೆ ರಚನೆಗಳಿಗಿಂತ ಭಿನ್ನವಾಗಿ ರೂಪುಗೊಳ್ಳುತ್ತಿತ್ತು. ಇಂದಿನ ಆಧುನಿಕ ಮಹಿಳೆ ಹಾಗೂ ಪ್ರಬುದ್ಧ ಕರ್ಣಾಟಕದ ಆರಂಭದ ಸಂದರ್ಭದಲ್ಲಿದ್ದ ಮಹಿಳಾ ಧೋರಣೆಗೂ ಅತಿ ಹೆಚ್ಚು ಅಂತರವೇನಿಲ್ಲ.

'The Bernard cohn omnibus ನ ಲೇಖಕ Bernard cohn 'Sanskrit the language of Indian law and lore' ಎಂಬ ಪಠ್ಯದಲ್ಲಿ ಮನುಧರ್ಮಶಾಸ್ತ್ರ ಏಕೆ ಮತ್ತು ಹೇಗೆ ಪುನರ್ ಕಟ್ಟಲ್ಪಟ್ಟಿತು ಎಂದು ತಿಳಿಸುತ್ತಾರೆ.[೩] William Jones ಒಬ್ಬ ಪತ್ರಕರ್ತ ೧೭೮೩ರಲ್ಲಿ ಈ ತರದ ಸಂಸ್ಕೃತದಲ್ಲಿರುವ ವಾಙ್ಮಯದ ಮೂಲಕ ಸಾಮಾಜಿಕ ಮಾದರಿಯೊಂದನ್ನು ರಚಿಸುವುದಕ್ಕೆ ತಾತ್ವಿಕತೆಯನ್ನು ಕಟ್ಟಿಕೊಡುತ್ತಾನೆ. ಇದರ ಚರ್ಚೆ ಪುಟ ೨೮-೩೧ರವರೆಗೆ ಇದೆ.

ಆಧುನಿಕ ಕಾಲದ ಭಾರತೀಯ ನಾರಿಯು ಇಲ್ಲಿ ಕಂಡುಬರುವ ಒಂದು ಮಾದರಿಯ ಜೊತೆಗೆ ಸ್ವಲ್ಪಮಟ್ಟಿಗೆ ಆಧುನಿಕ ಮೌಲ್ಯವನ್ನು ಒಳಗೊಂಡ ವ್ಯಕ್ತಿತ್ವವಾಗಿ ರೂಪುಗೊಳ್ಳುತ್ತಿದ್ದಳು. ಈ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯದಲ್ಲಿ ವಿಶೇಷವಾಗಿ ಪ್ರಬುದ್ಧ ಕರ್ಣಾಟಕದಲ್ಲಿ ಯಾವ ರೀತಿಯ ಹೆಣ್ಣು ರೂಪುಗೊಳ್ಳುತ್ತಿದ್ದಳು ಎಂಬುದನ್ನು ಪರಿಶೀಲಿಸುವುದು ಈ ಅಧ್ಯಾಯದ ಮುಖ್ಯ ಉದ್ದೇಶ.

## ಕನ್ನಡ ನುಡಿವೆಣ್ಣಿನ ಜಾಣ್ಣುಡಿ

೧೯೨೯ರ ವಿಭವ ಸಂವತ್ಸರದ ಪ್ರಬುದ್ಧ ಕರ್ಣಾಟಕದ ೩೮ನೇ ಸಂಚಿಕೆ (ಕಾಮನ ಸಂಚಿಕೆ)ಯ 'ಕನ್ನಡ ನುಡಿವೆಣ್ಣಿನ ಜಾಣ್ಣುಡಿ'[೪] ಕವಿತೆಯನ್ನು ನೋಡೋಣ. ಬರೆದವರು ಎಂ. ಎಸ್. ಬಸವಲಿಂಗಯ್ಯ. ಇಲ್ಲಿ ನಮ್ಮ ಸೊಗಸಾದ 'ಕನ್ನಡ' ಭಾಷೆಯನ್ನೇ 'ಸುಂದರ ಹೆಣ್ಣಿಗೆ' ಹೋಲಿಸಲಾಗಿದೆ. ಮೊದಲಿಗೆ ವಿವಿಧ ಸಾಮ್ರಾಟರ ಆಳ್ವಿಕೆಯಲ್ಲಿ ವಿವಿಧ ಕವಿಗಳಿಂದ (ನಾಗವರ್ಮ, ಗುಣವರ್ಮ, ಪಂಪ-ಪೊನ್ನ-ರನ್ನ) ತಾನು ಹೇಗೆ ಮೆರೆದೆನೆಂದು ಆಕೆ ಹೆಮ್ಮೆಪಡುತ್ತಾಳೆ. ಪರಭಾಷೆಗಳ ಗೊಂದಲದಲ್ಲಿ ಸೋಲದೇ 'ಜನಭಾಷಾ ಮಾಧ್ಯಮ'ದ ವೀರಶೈವರ ಸರಳ ವಚನಗಳಿಂದ 'ತಿರೆಯೊಳಗೆ ಮುಖವೆತ್ತಿ' ಬಾಳಲು ಪ್ರಾರಂಭಿಸಿದೆನೆಂದು ಹೇಳುತ್ತಾಳೆ. ಹರಿದಾಸ ಸಾಹಿತ್ಯದಿಂದಾದ ಸೌಹಾರ್ದವನ್ನು ಸ್ಮರಿಸುತ್ತಾಳೆ. ಕನ್ನಡದ ಹೆಣ್ಣು, 'ಎನ್ನ ಸಹಜಾತೆಯರ ಮಧ್ಯದೊಳವಗಂ ಇನ್ನು ತಲೆತಗ್ಗಿಸುವ ಭಯವಿಲ್ಲವೆಂದಿಗುಂ' ಎಂದು ಸಂತಸ ಪಡುತ್ತಾಳೆ. ಎಲ್ಲೆಲ್ಲಿಯೂ ಕನ್ನಡದ ಏಳಿಗೆಯನ್ನು, ರಕ್ಷಣೆಯನ್ನು ಕಂಡು ನಲಿಯುತ್ತಾಳೆ. ತನಗೆ ಒಡವೆ-ವಸ್ತ್ರಗಳನ್ನು ತೊಡಿಸುತ್ತಾ ಎಲ್ಲರೂ ತನ್ನನ್ನು ಹರಸುವರು, ಮೆರೆಸುವರೆಂದು ಹಾಡಿದ್ದಾಳೆ. ಕವಿತೆಯ ಹೆಸರೇ 'ಕನ್ನಡ ನುಡಿವೆಣ್ಣಿನ ಜಾಣ್ಣುಡಿ'. ಹಾಗಾಗಿ ಹೆಣ್ಣಿನ ಜಾಣತನದ, ಚತುರತೆಯ ಸ್ವಭಾವವು ಹೆಸರಲ್ಲೇ ವ್ಯಕ್ತವಾಗಿ, ಹೆಣ್ಣಿನ ಮೂಲಕ ಕವಿತೆಯ ಸೌಂದರ್ಯವನ್ನು ಹೆಚ್ಚಿಸಿದೆ. ಹೆಣ್ಣು ಮಕ್ಕಳು ತರತರದ ಉಡುಗೆ – ತೊಡುಗೆಗಳನ್ನು ಬಯಸುತ್ತಾರೆಂಬುದು ಕವಿಯ ಮನದಲ್ಲಿದೆ ಎಂಬುದೂ ಇಲ್ಲಿ ತಿಳಿಯುತ್ತದೆ. 'ಸನ್ನುತನ ಕೃಷ್ಣನಾಶ್ರಯದಲ್ಲಿ ಬಾಳ್ವೆನಾಂ' ಎನ್ನುವಾಗ 'ಹೆಣ್ಣಿಗೆ ಗಂಡಿನಾಶ್ರಯ ಬೇಕು' ಎಂಬುದನ್ನು ಕವಿ-ಕವಿತೆ ಸಮರ್ಥಿಸಿರುವಂತೆ ಕಾಣುತ್ತದೆ.

---

೩. The Bernard Cohn Omnibus - Author Bernard Cohn - Oxford University Press - 2004.

೪. ಎಂ. ಎಸ್. ಬಸವಲಿಂಗಯ್ಯ – ಪ್ರ.ಕ. ೧೯೨೯ – ವಿಭವ ಸಂವತ್ಸರ – ೩೮ನೇ (ಕಾಮನ)ಸಂಚಿಕೆ.

## ಹಳ್ಳಿಯ ಹುಡುಗಿ

ಅದೇ ವಿಭವ ಸಂವತ್ಸರದ ಪ್ರಬುದ್ಧ ಕರ್ಣಾಟಕದ '೩೮ ಸಂದಚಿಕೆಯ ಮತ್ತೊಂದು ಕವಿತೆ 'ಹಳ್ಳಿಯ ಹುಡುಗಿ' ರಚನೆ ಕೆ. ವಿ. ಪುಟ್ಟಪ್ಪ (ಆ ಸಮಯದಲ್ಲಿ 'ಕುವೆಂಪು' ಎಂಬ ಕಾವ್ಯನಾಮದಿಂದ ಅವರು ಕವಿತೆ ರಚಿಸುತ್ತಿರಲಿಲ್ಲ.) ಹುಲ್ಲಿನ ಹೊರೆಯನ್ನು ತಲೆಯಮೇಲೆ ಹೊತ್ತು ದಾರಿಯಲ್ಲಿ ಬರುತ್ತಿದ್ದ ಮಲೆನಾಡಿನ ಹಳ್ಳಿ ಹುಡುಗಿಯ ಸುಂದರ ಚಿತ್ರಣದ ಜೊತೆಗೇ ಕವಿ ನಿಸರ್ಗವನ್ನು ವರ್ಣಿಸುತ್ತಾರೆ. ಸಂಜೆ ಅವಳ ಕಂಗಳಲ್ಲಿ ಕಾಣುತ್ತಿದ್ದು, ಅವಳೆದೆಯಲ್ಲಿ ಹಕ್ಕಿಗಳು ಹಾಡಿ ಕಾವ್ಯದ ಹಬ್ಬವನ್ನೇ ಮಾಡಿದವೆನ್ನುತ್ತಾರೆ. 'ಹಳ್ಳಿಯ ಹುಡುಗಿ'ಯನ್ನು ಕಂಡ ಕವಿ ಬಡತನದಲ್ಲೂ ರತಿಯಂತಿದ್ದ ತನ್ನ ತಂಗಿ ಹಾಗೂ ಮಂಗಳವಾದ ತಾಯಿಯನ್ನು ನೆನಪಿಸಿಕೊಳ್ಳುತ್ತಾರೆ. ಹಳ್ಳಿಯ ಲಾವಣಿ ಹಾಡಿದ ಹುಡುಗಿಯಲ್ಲಿ, ಆ ಲೀಲೆಯಲ್ಲಿ ಕಮರವನ್ನು ಕಂಡುದಾಗಿ ಹೇಳುತ್ತಾರೆ.

ನೋಡಿದಳೆನ್ನನು ತಲೆಯನು ಎತ್ತಿ
ನುಡಿದಳು ನಾಚಿಗೆಯಿಲ್ಲದಲೆ
ದನಿಯಲಿ ಮುಗುದತೆ ಮೈದೋರಿತ್ತು

ಎಂದು ಹೇಳುವಾಗ ಮುಗ್ಧಭಾವದಲ್ಲಿ ಮುಗ್ಧತೆಗೆ ಸ್ಥಾನವಿದೆಯೇ ಹೊರತು, ಅರ್ಥವಿಲ್ಲದ ನಾಚಿಕೆಗಲ್ಲ ಎಂದು ಕವಿ ಹೇಳುವಂತೆ ಕಾಣುತ್ತದೆ. ಮುಂದೆ ಹೊರಟ ಹಳ್ಳಿಯ ಹುಡುಗಿ – ಹಸುರಿನ ಹಾದಿ ದೇವಿಯ ಭಕ್ತ – ಕುರಿಮರಿ ಎಲ್ಲವನ್ನೂ ಹಿಂದಿರುಗಿ ನೋಡಿದ ಕವಿಗೆ ತನು–ಮನ, ಎದೆಯೆಲ್ಲಾ ಕರಗಿ ವರವನ್ನು ಸಲ್ಲಿಸಿದ ಈಶನನ್ನೂ ತಾವು ಈ ರೀತಿ ವೀಕ್ಷಿಸಲು ಸಾಧ್ಯವಿಲ್ಲವೆಂಬ ಧನ್ಯತಾಭಾವವನ್ನು ಮೆರೆಯುತ್ತಾರೆ. ಹೆಣ್ಣಿನ ಮುಗ್ಧತೆಯ ಹಿಂದೆ ದೈವತ್ವವಿದೆ ಎಂದು ಕವಿ ಕೆ. ವಿ. ಪುಟ್ಟಪ್ಪನವರು ಇಲ್ಲಿ ಹಾಡಿದ್ದಾರೆ. ಇಲ್ಲಿಯ ಹೆಣ್ಣು ಅರಿವು ಆಧ್ಯಾತ್ಮಿಕತೆಯೆಡೆಗೆ ಸಾಗಲು ಸಾಧ್ಯವಾಗದ ಹೆಣ್ಣು. ವಚನಕಾರರ ಆಧ್ಯಾತ್ಮಿಕ ತತ್ವದ ಹೆಣ್ಣನ್ನು ಕುವೆಂಪು ಇಲ್ಲಿ ಚಿತ್ರಿಸಿದ್ದಾರೆ.

## ಸಣ್ಣಕಥೆಗಳು

ಮಹಿಳೆಯನ್ನು ಕುರಿತ ಸಣ್ಣಕಥೆಗಳಲ್ಲಿ ಮೂರು ಕಥೆಗಳನ್ನು ನಾವು ಈಗ ಪರಿಶೀಲಿಸೋಣ. ವಿ. ಸೀತಾರಾಮಯ್ಯನವರು ಬರೆದ **'ರಾಧೆ'** ಎಂಬ ಸಣ್ಣ ಕಥೆಯು ೧೯೨೩ಳನೇ ಇಸವಿಯ ರುಧಿರೋದ್ಗಾರಿ ಸಂವತ್ಸರದ ೧೭ನೇ ಸಂಚಿಕೆ (ಸಂಕ್ರಾತಿ ಸಂಚಿಕೆ)ಯಲ್ಲಿ ಪ್ರಕಟವಾಗಿದೆ. ಚಿಕ್ಕದಾದರೂ ಚೊಕ್ಕದಾಗಿ ಮನೆಯನ್ನಿಟ್ಟುಕೊಂಡಿದ್ದ ರಾಧೆ, ಶ್ರೀನಿವಾಸನ ಪತ್ನಿ, ಬಹಳ ಬಡತನದ ಸಂಸಾರವಾದರೂ ರಾಧೆ ಅದನ್ನು ತನ್ನ ಧೈರ್ಯದಿಂದ ನಡೆಸಿಕೊಂಡು ಹೋಗುತ್ತಿದ್ದಳು. ಮಕ್ಕಳು ಆಸೆಪಟ್ಟಿದ್ದನ್ನು ಕೊಡಿಸಲೂ ಶ್ರೀನಿವಾಸನಿಗೆ ಆಗುತ್ತಿರಲಿಲ್ಲ. ರಾಧೆ ರಾಟೆಯಲ್ಲಿ ಲಡಿ ಮಾಡಿ, ಅಕ್ಕಪಕ್ಕದವರಿಗೆ ಧಾನ್ಯ ಬೀಸಿಕೊಟ್ಟು ಅವುಗಳ ಆದಾಯದಿಂದ ಸಂಸಾರವನ್ನು ತೂಗಿಸಲು ಯತ್ನಿಸುತ್ತಿದ್ದಳು. ಪತಿ ಚಿಂತಾಕ್ರಾಂತನಾಗಿದ್ದರೆ ಅವನನ್ನು ಉಪಚರಿಸಿ, ಆದರಿಸಿ ಅವನಿಗೆ ಧೈರ್ಯ ತುಂಬುತ್ತಿದ್ದಳು. ಇಂತಹ ರಾಧೆ ಹೃದಯ ದೌರ್ಬಲ್ಯದಿಂದ ತೀರಿಹೋಗುತ್ತಾಳೆ. ಆರು ತಿಂಗಳ ನಂತರವೂ ಶ್ರೀನಿವಾಸನಿಗೆ ಅವಳನ್ನು ಮರೆಯಲಾಗುವುದಿಲ್ಲ. ಅವನ ಕೆಲಸವೂ ಹೋಗುತ್ತದೆ ನಂತರ ನೆರೆಮನೆಯ ರಘುನಾಥನ ಸಹಾಯದಿಂದ ಶ್ರೀನಿವಾಸ ತನ್ನ ಎರಡು ಮಕ್ಕಳೊಡನೆ ಹೊಸ ಕೆಲಸಕ್ಕಾಗಿ ಹೊರಡುತ್ತಾನೆ. ಇಲ್ಲಿ ಕತೆಗಾರರು ರಾಧೆಯನ್ನು ವರ್ಣಿಸುವಾಗ ಅವಳನ್ನು **'ಸುಶೀಲೆ, ಸುಗುಣೆ'** ಎಂದು ಹೊಗಳುತ್ತಾರೆ. ಯಾರು ಸಂಸಾರದ ಕಷ್ಟವನ್ನು ಅನುಭವಿಸಿ ಗಂಡನನ್ನು ಅನುಸರಿಸಿ ನಡೆಯುತ್ತಾರೋ ಅವರಿಗೆ ಇಂತಹ ಬಿರುದನ್ನು ನೀಡಿ ಹೊಗಳುವ ಪರಿ ಈಗಲೂ – ಆಗಲೂ ಒಂದೇ ಎಂದು

ಹೇಳಬಹುದು. ಹೆಂಡತಿ ಸತ್ತಕೂಡಲೇ ಕತೆಗಾರರು ಕಥಾನಾಯಕನಿಗೆ ಮದುವೆ ಮಾಡಿಸದಿರುವುದು ಆಧುನಿಕ ಮೌಲ್ಯವಾಗಿದ್ದು ಈ ಕಥೆಯ ಒಂದು ಮೆಚ್ಚುಗೆಯ ಅಂಶವಾಗಿದೆ.

**'ಸಂಸಾರದಲ್ಲಿ ಒಡಕು'** ಎಂಬ ಸಣ್ಣಕಥೆಯು ೧೯೨೪ರ ರುಧಿರೋದ್ಗಾರಿ ಸಂವತ್ಸರದ ೧೮ನೇ (ಕಾಮನ) ಸಂಚಿಕೆಯಲ್ಲಿ ಪ್ರಕಟವಾಗಿದೆ. ಲೇಖಕರು ಕೆ. ಸಂಪಗಿರಾಮಯ್ಯನವರು. ಕಥೆಯ ನಾಯಕ ಲಕ್ಷ್ಮಣರಾಯ ತಾಯಿ ಸಾವಿತ್ರಮ್ಮ – ಹೆಂಡತಿ ನಾಗಮ್ಮ. ಅತ್ತೆ ಸೊಸೆಯರ ನಡುವೆ ಹೊಂದಿಕೆಯಾಗದೇ ಸಾವಿತ್ರಮ್ಮ ತನ್ನ ಭಾವನ ಮಗನಾದ ರಾಮಮೂರ್ತಿಯ ಜೊತೆ ಮಗನ ಅನುಮತಿ ಪಡೆದು ಊರಿಗೆ ಹೋಗುತ್ತಾಳೆ. ತಾಯಿ ಹೋಗಿದ್ದನ್ನು ಕಂಡು ಲಕ್ಷ್ಮಣರಾಯನು ವಿಶೇಷವಾಗಿ ದುಃಖಿಸುತ್ತಾನೆ.

ಒಂದೆರಡು ತಿಂಗಳು ಕಳೆದ ನಂತರ ನಾಗಮ್ಮನ ತಾಯಿ ಸುಂದರಮ್ಮ ಸುಳ್ಳು ತಂತಿ ವರ್ತಮಾನ ಕೊಟ್ಟು ಅಳಿಯ ಮಗಳನ್ನು ಕರೆಸಿಕೊಳ್ಳುತ್ತಾಳೆ. ವಿಷಯ ತಿಳಿದ ಲಕ್ಷ್ಮಣ ಹೊರಡಲನುವಾಗಿ ಹೆಂಡತಿಯನ್ನು ಕರೆದಾಗ ಸುಂದರಮ್ಮ ಮಗಳನ್ನು ಕಳಿಸಲು ಒಪ್ಪುವುದಿಲ್ಲ. ಕೋಪಗೊಂಡ ಲಕ್ಷ್ಮಣ ಹೊರಟೇ ಹೋಗುತ್ತಾನೆ.

ಹೆಂಡತಿ – ತಾಯಿ ಇಬ್ಬರೂ ಇಲ್ಲದೇ ಅನಾಥನಂತಾದ ಲಕ್ಷ್ಮಣ ಊಟ ತಿಂಡಿಗೂ ಒದ್ದಾಡುತ್ತಾ ಏಕಾಂಗಿಯಾಗುತ್ತಾನೆ. ಇತ್ತ ಗಂಡನಿಲ್ಲದೇ ಮಂಕಾದ ನಾಗಮ್ಮನನ್ನು ಕಂಡು ಅವಳ ತಂದೆ ತಮ್ಮ ಸ್ನೇಹಿತ ರಾಮಚಂದ್ರನಿಗೆ ಲಕ್ಷ್ಮಣನ ಬಗ್ಗೆ ವಿಚಾರಿಸಲು ಹೇಳಿದರೆ ಅಲ್ಲಿ ಲಕ್ಷ್ಮಣನೇ ಸಿಗುವುದಿಲ್ಲ. ಅವನು ಎಲ್ಲಿ ಹೋದನೆಂದು ಯಾರಿಗೂ ತಿಳಿದಿರುವುದಿಲ್ಲ. ಲಕ್ಷ್ಮಣರಾಯ ಬದುಕಿದ್ದಾನೆಯೇ, ಇಲ್ಲವೇ ಎಂಬುದೂ ಯಾರಿಗೂ ಇಂದಿಗೂ ತಿಳಿದಿಲ್ಲ. (ಅತ್ತೆ ಸೊಸೆಯರ ಅಜ್ಞಾನ, ಅವಿವೇಕಗಳಿಗೆ ಇದು ಶಿಕ್ಷೆಯೆನ್ನುತ್ತಾರೆ ಲೇಖಕರು – ಸಂಸಾರದಲ್ಲಿ ಅತ್ತೆ–ಸೊಸೆಯರ ನಡುವೆ ಮೂಡದ ಹೊಂದಾಣಿಕೆ, ಅವಿವೇಕದ ವರ್ತನೆ ಆ ಸಂಸಾರದ ಅನಾಹುತಕ್ಕೆ ಕಾರಣವಾಗುವುದೇ ಇಲ್ಲಿನ ಪ್ರಧಾನ ಅಂಶ.

**'ಶಾರದೆ'** ಎಂಬ ಸಣ್ಣಕಥೆಯು ೧೯೨೧ರ ದುರ್ಮತಿ ಸಂವತ್ಸರದ ೮ನೇ (ವಿನಾಯಕನ) ಸಂಚಿಕೆಯಲ್ಲಿ ಪ್ರಕಟವಾದ ಬಹುಮಾನ ಪಡೆದ ಕಥೆ. ಲೇಖಕರು ಸೆಂಟ್ರಲ್ ಕಾಲೇಜು ವಿದ್ಯಾರ್ಥಿಯಾಗಿದ್ದ ಬಿ. ಕೃಷ್ಣಪ್ಪ. ಈ ಕಥೆಯು 'ವರದಕ್ಷಿಣೆ'ಯೆಂಬ ಪಿಡುಗಿನಿಂದ ಆಗುವ ಅನಾಹುತವನ್ನು ಮನಕರಗುವಂತೆ ಬಿಂಬಿಸಿದೆ.

ಕೃಷ್ಣಮೂರ್ತಿ ಹಾಗೂ ರುಕ್ಮಿಣಿಯ ಮಗಳೇ ಶಾರದೆ. ೧೩ ತುಂಬಿದರೂ ಅವಳಿಗೆ ಮದುವೆಯಾಗದಿರುವುದೇ ಅವರಿಬ್ಬರ ಬಹುದೊಡ್ಡ ಚಿಂತೆ. ಕೃಷ್ಣಮೂರ್ತಿಯ ಸ್ನೇಹಿತ ರಾಮಚಂದ್ರರಾಯ ಸಿರಿವಂತನಾಗಿದ್ದು ಅವನಿಗೆ ತನ್ನ ಮಗಳನ್ನು ಕೊಡಬೇಕೆಂಬುದು ಕೃಷ್ಣಮೂರ್ತಿಯ ಆಸೆ. ಆದರೆ ಅದಕ್ಕೆ ರಾಮಚಂದ್ರರಾಯ ಬಯಸಿದ್ದು ೪೦೦೦ ರೂ. ವರದಕ್ಷಿಣೆ. ಕೈಲಾಗದಿದ್ದರೂ ಹೇಗೋ ಮಗಳು ಚೆನ್ನಾಗಿರಲಿ ಎಂದು ಬಯಸಿದ ಕೃಷ್ಣಮೂರ್ತಿ ರಾಮಚಂದ್ರನನ್ನು ಭೇಟಿಯಾದರೆ ಅವನು 'ಉಂಬೋದು ಉಡೋದು ನಂಟಾಚಾರ, ಕೊಂಬೋದು ಕೊಡೋದು ಲೆಕ್ಕಾಚಾರ' ಎಂದು ಹೇಳಿ ೪೦೦೦ ರೂ.ಗಳಿಗಿಂತ ಕಡಿಮೆ ವರದಕ್ಷಿಣೆಗೆ ಒಪ್ಪುವುದಿಲ್ಲವೆಂದು ಹೇಳುತ್ತಾನೆ. ಸಾಲ ಮಾಡಿ ೪೦೦೦ ರೂ. ವರದಕ್ಷಿಣೆ ಕೊಟ್ಟ ಕೃಷ್ಣಮೂರ್ತಿ ವೈಭವದಿಂದ ಮಗಳ ಮದುವೆ ಮಾಡುತ್ತಾನೆ.

ಶಾರದೆಯ ಮದುವೆಯಾದ ವರ್ಷವೇ ಅವಳ ಮಾವ ತೀರಿಹೋಗುತ್ತಾನೆ. ಗಂಡ ಮಾಧವರಾಯ ಕುಡುಕನಾಗಿ

ಕೆಟ್ಟ ದಾರಿ ಹಿಡಿಯುತ್ತಾನೆ. ಶಾರದೆಗೆ ಹಿಂಸೆ ಕೊಡುತ್ತಿದ್ದು ಅವನು ಜ್ವರ ಬಂದು ಹಾಸಿಗೆ ಹಿಡಿದಿರುತ್ತಾನೆ. ಇತ್ತ ಹೆಂಡತಿಯನ್ನು ಕಳೆದುಕೊಂಡ ಕೃಷ್ಣಮೂರ್ತಿ ಸಾಲ ತೀರಿಸಲು ಒದ್ದಾಡುತ್ತಾನೆ. ಕಲ್ಕತ್ತಾದಲ್ಲಿ ೫೦ ರೂ. ಸಂಬಳದ ಕೆಲಸಕ್ಕೆ ಸೇರಿದ ಕೃಷ್ಣಮೂರ್ತಿ ಸಂಬಳದ ಬಹುಪಾಲನ್ನು ಸಾಲಗಾರರಿಗೆ ಕಳುಹಿಸುತ್ತಿರುತ್ತಾನೆ. ತಾನು ಮಾಡದ ತಪ್ಪಿಗೆ ಸೆರೆಮನೆಯ ಪಾಲಾದ ಕೃಷ್ಣಮೂರ್ತಿ ಜ್ವರದಿಂದ, ಸಾಲದ ವೇದನೆಯಿಂದ ಮಗಳಿಗೆ ಒಂದು ಕಾಗದ ಬರೆದು ಸತ್ತೇಹೋಗುತ್ತಾನೆ.

ಹಾಸಿಗೆ ಹಿಡಿದ ಶಾರದೆಯ ಗಂಡ ಮಾಧವರಾಯ ಒಂದು ತಿಂಗಳ ನಂತರ ದೈವಾಧೀನನಾಗುತ್ತಾನೆ. ತಾನೂ ಸಾಯಬೇಕು ಎಂದು ಯೋಚಿಸಿದ ಶಾರದೆ ಮಗುವಿನ ಮುಖ ನೋಡಿ ಬದುಕಿರಲು ನಿರ್ಧರಿಸುತ್ತಾಳೆ. ಗಂಡನ ಅಂತ್ಯಕ್ರಿಯೆಗಳನ್ನು ಒಬ್ಬ ಬ್ರಾಹ್ಮಣನ ಕೈಕಾಲು ಹಿಡಿದು ಮಾಡಿಸುತ್ತಾಳೆ. ಮೂರನೇ ದಿನ ಕೃಷ್ಣಮೂರ್ತಿ ಬರೆದ ಪತ್ರ ಅವಳ ಕೈ ಸೇರುತ್ತದೆ. ಇನ್ನೂ ಉಳಿದ ಸಾವಿರ ರೂಪಾಯಿ ಸಾಲ ತೀರಿಸೆಂದು ಕೃಷ್ಣಮೂರ್ತಿ ತಿಳಿಸಿರುತ್ತಾನೆ. ಅವಳಿಗೆ ಬರಸಿಡಿಲೆರಗಿದಂತಾಗುತ್ತದೆ. ಇದ್ದ ಆಸ್ತಿಪಾಸ್ತಿಯೆಲ್ಲ ಗಂಡ ಮಾಡಿದ ಸಾಲಗಾರರ ಪಾಲಾದ ಮೇಲೆ ಬಾಲಿಕಾ ಪಾಠಶಾಲೆಯಲ್ಲಿ 'ಮೇಷ್ಟರು' ಕೆಲಸಕ್ಕೆ ಸೇರುತ್ತಾಳೆ. ತಂದೆ ಮಾಡಿದ್ದ ಸಾಲವನ್ನು ತೀರಿಸಲು ಆರಂಭಿಸುತ್ತಾಳೆ. ಅವಳ ಮಗುವೂ ಇದ್ದಕ್ಕಿದ್ದ ಹಾಗೆ ತೀರಿ ಹೋಗುತ್ತದೆ. ನಂತರದ ಆರು ಮಾಸಗಳಲ್ಲಿ ಅವಳು ಸಾಲ ತೀರಿಸಿ ಋಣಮುಕ್ತಳಾಗುತ್ತಾಳೆ.

ನೌಕರಿ ಬಿಟ್ಟು ತನ್ನ ತೌರುಮನೆಯಿದ್ದ ಹಳ್ಳಿಗೆ ಬಂದ ಶಾರದೆ ಮನೆಯ ಅಂಗಳದಲ್ಲಿ ಹೋಗಿ ತಾನು ಹಾಕಿದ್ದ ಪಾರಿಜಾತದ ಕೊಂಬೆ ಹಿಡಿದು ದುಃಖಿಸುತ್ತಾಳೆ. ಆ ಮನೆಯ ಆಳು ಅವಳು ಹುಚ್ಚಿಯೆಂದು ಆಚೆ ಕಳುಹಿಸುತ್ತಾನೆ. ಅಲ್ಲಿಂದ ನದೀ ತೀರಕ್ಕೆ ಹೊರಟ ಶಾರದೆ ದೇವರನಾಮ ಹಾಡುತ್ತಾ, ಅಳುತ್ತಾ, ತನ್ನಷ್ಟಕ್ಕೆ ತಾನೇ ಮಾತನಾಡಿಕೊಳ್ಳುತ್ತಾ ನದಿಯ ಪ್ರವಾಹದಲ್ಲಿ ಒಂದಾಗುತ್ತಾಳೆ. 'ಯಾರಿಗೆ ಯಾರೋ ಪುರಂದರ ವಿಠಲ' ಎಂಬ ಅವಳ ನೋವಿನ ಹಾಡು ಈಗಲೂ ನದಿಯ ನೀರಿನಲ್ಲಿ ಕೇಳುವುದೆಂದು ಬಿ. ಕೃಷ್ಣಪ್ಪನವರು ಕಥೆಯನ್ನು ಮುಗಿಸುತ್ತಾರೆ. ವರದಕ್ಷಿಣೆಯ ಪಿಡುಗು ಕುಟುಂಬಗಳನ್ನೇ ಹೇಗೆ ಸರ್ವನಾಶ ಮಾಡುತ್ತದೆಂಬುದನ್ನು ಲೇಖಕರು ಮನ ಮಿಡಿಯುವಂತೆ ಚಿತ್ರಿಸಿದ್ದಾರೆ. ಅಂದಿನ – ಇಂದಿನ ಯುವ ಜನಾಂಗದವರು 'ವರದಕ್ಷಿಣೆ' ಎಂಬ ಪಿಡುಗನ್ನು ವಿರೋಧಿಸಬೇಕೆಂಬ ಆಶಯವನ್ನು ಈ ಕಥೆ ಮೂಡಿಸುತ್ತದೆ.

'ರಾಧೆ' ಹಾಗೂ 'ಶಾರದೆ' ತಮ್ಮ ವಿವೇಕ ತಾಳ್ಮೆ, ಬುದ್ಧಿವಂತಿಕೆಯಿಂದ ನಮ್ಮ ಗಮನ ಸೆಳೆದರೆ 'ಸಾವಿತ್ರಮ್ಮ' ಹಾಗೂ 'ನಾಗಮ್ಮ' ತಮ್ಮ ಅವಿವೇಕ, ಮುಂಗೋಪ ಹಾಗೂ ಮೂರ್ಖತನದಿಂದ ಓದುಗರ ಸಹನೆಯನ್ನು ಪರೀಕ್ಷಿಸುತ್ತಾರೆ. ಆಧುನಿಕ ಸಂಸ್ಕೃತಿಯ ಮಹಿಳೆ ವಿವೇಕಿಯಾಗಿ, ಆರ್ಥಿಕವಾಗಿ ಸಬಲಳಾಗಬೇಕೆಂಬ ಆಶಯವನ್ನು ಸೆಂ.ಕಾ.ಕ.ಸಂ.ದ. ಪ್ರ.ಕ.ವು. ವ್ಯಕ್ತಪಡಿಸುತ್ತಿತ್ತೆಂಬುದನ್ನು ಮೇಲಿನ ಕಥೆಗಳು ನಿರೂಪಿಸುತ್ತವೆ.

## ಅನಾಥೆ

ಕೆ. ಗೋಪಾಲಕೃಷ್ಣರಾಯರು ಬರೆದಿರುವ 'ಅನಾಥೆ'[೧] ಕವನವು ತನ್ನದೇ ಆದ ಶೈಲಿಯಿಂದ ಓದುಗರ ಮನ ಸೆಳೆಯುತ್ತದೆ. ಗುಡುಗು ಮಿಂಚು ಸಿಡಿಲುಗಳ ಆರ್ಭಟದಿಂದ ಸುರಿಯುವ ಮಳೆಯ ನಡುವೆ ಕವಿಗೆ ಒಂದು ಆರ್ತದನಿ ಕೇಳುತ್ತದೆ. ಭೂಮಿಯೇ ಬಿರಿವಂತೆ ಸಿಡಿಲು ಹೊಡೆಯುತ್ತಿರುವ ದನಿಯನ್ನು ಕೇಳಿದ ಕವಿ ಭೀತಿಯನ್ನು ತೊರೆದು ಮಳೆಯಲ್ಲೇ ಹೋಗಿ ನೋಡಿದರೆ ಮರದ ಕೆಳಗೆ ಕೊರಗುತ್ತ ಯಾರೋ ಕುಸಿದಿದ್ದಳು. ಚಲಿಸಲು ಅವಳ ದೇಹದಲ್ಲಿ ಶಕ್ತಿಯೇ ಇರಲಿಲ್ಲ. ಅವಳ ಕೈಹಿಡಿದು ಮನೆಗೆ ಕರೆತಂದರೆ ನಿಟ್ಟುಸಿರು ಬಿಟ್ಟು ಅಲ್ಲೇ ಒರಗುತ್ತಾಳೆ. ಕನಿಕರಗೊಂಡ ಮನೆಯವೆಲ್ಲ ದೀಪವನ್ನು ತಂದು ಅವಳನ್ನು ನೋಡಿದರು. ಸೊಬಗಿನ ಹೆಣ್ಣಿನ ಮಡಿಲಲ್ಲಿ ಒಂದು ಎಳೆಗೂಸಿತ್ತು. ಅವಳು ಚಿಂದಿಯನ್ನು ಹೊದ್ದಿದ್ದು ಮಗುವಿಗೆ ತನ್ನ ದೇಹ ಹಾಗೂ ನೀಳ್ಗುರುಳನ್ನೇ ಹೊದಿಕೆ ಮಾಡಿದ್ದಳು. ಎಲ್ಲವೂ ತೊಯ್ದು ಹನಿ ತೊಟ್ಟಿಡುತ್ತಿದ್ದವು. ಅವಳು ಚಳಿ ತಡೆಯದೇ ನಡುಗುತ್ತಿದ್ದಳು. ಸುತ್ತಲಿದ್ದವರನ್ನು ನೋಡಿ ನಾಚುತ್ತ ಕಂದನನ್ನು ಬಿಗಿದಪ್ಪಿದಳು. ಹೊದಿಕೆಯನ್ನು ಕೊಟ್ಟ ಕೂಡಲೇ ಕಂದನನ್ನು ಅದರಲ್ಲಿ ಕವಿಸಿದಳು. ಮಮತೆಯಿಂದ ಮಗುವನ್ನು ಮುದ್ದಿಸತೊಡಗಿದಳು.

ಅಯ್ಯೋ ಇನ್ನದನೇನೆಂದೊರೆಯಲಿ
ಶವವೆಂದರಿಯಳು ಲಾಲಿಸುತಿರುವಳು
ಎದೆಗೊತ್ತಿ
ಅಂದಿನ ನೋಟವು ಹೃದಯವನಿರಿಯದೆ
ಜನನಿಯ ಒಡಲಿಂದದ ಕಸಿಕೊಳ್ಳಲು
ಆಗುವುದೇ!

ಎಂದು ಕವಿ ಅದು ಸತ್ತ ಮಗುವಿನ ಶವವೆಂದಾಗ ಓದುಗರಿಗೆ ಆಘಾತವಾಗುತ್ತದೆ. ಅನಾಥೆಯದನ್ನರಿಯಳೆಂದಾಗ ಮನದಲ್ಲಿ ಮರುಕ ಮೂಡುತ್ತದೆ. ಪ್ರಣಯದ ಉನ್ಮಾದದಲ್ಲಿ ಆ ಬಾಲೆ ಮೈಮರೆತಾಗ ಆದ ಅನಾಹುತವೇ ಇದಕ್ಕೆಲ್ಲ ಕಾರಣ. ಕಂದನಿಗಾಗಿ ಅವಳು ಬದುಕಿರುತ್ತಾಳೆ. ಇನ್ನು, ಕಂದನ ನಿಜಸ್ಥಿತಿಯನ್ನರಿತಾಗ ಅವಳ ಗತಿಯೇನು? ಆಘಾತದ ಆ ಸಿಡಿಲಿನ ಹೊಡೆತವನ್ನು ಈ ಜನನಿ ಅದೆಂತು ಸಹಿಸುವಳೋ ಎಂದು ಕವಿ ಆತಂಕ ಪಡುತ್ತಾರೆ. ಇಲ್ಲಿ ನೊಂದ ಹೆಣ್ಣಿಗಾಗಿ ಮರುಗುವ ಕವಿಯ ಭಾವ, ಆ ಹೆಣ್ಣಿನ ಅನಾಥ ಸ್ಥಿತಿ ಓದುಗರಲ್ಲಿ ಒಂದು ಬಗೆಯ ತಾರುಣ್ಯದ ಮನಸ್ಸನ್ನು ಮೂಡಿಸುತ್ತದೆ. ಅನಾಥೆಗೆ ಕರುಣೆ ತೋರಿ ಆಶ್ರಯ ನೀಡುವವರ ಬಗ್ಗೆ ಹೆಮ್ಮೆಯೆನಿಸುತ್ತದೆ.

ಇದಕ್ಕೆ ಸರಿಸಾಟಿಯಾಗಿ ನಾವು 'ಶ್ರೀ'ಯವರ 'ಇಂಗ್ಲಿಷ್ ಗೀತೆಗಳು' ಸಂಕಲನದ 'ದುಃಖಸೇತು' ಕವಿತೆಯನ್ನು ನೋಡೋಣ. ಮೂಲ 'Hood (1799-1845) Bridge of Sighs' ಎಂಬ ಕವಿತೆ. ಇದೂ ಒಬ್ಬಳು ಅನಾಥ ಹೆಣ್ಣಿನ ಕಥೆ. ತನ್ನ ಜನ್ಮವೇ ರೋಸಿ, ಹೊಳೆಗೆ ಮುಳುಗಿದವಳ ಕಥೆ – ವ್ಯಥೆ. ದುಡುಕಿ ಕೆಟ್ಟವಳೆಂದು ಹೇಳಬಾರದೆನ್ನುತ್ತಾರೆ ಕವಿ. ಜವರಾಯ ನುಂಗಿದ ಆ ಹೆಣ್ಣಿನಲ್ಲಿ ಕಲ್ಮಷ ಹೋಗಿ ಕೇವಲ ನಿರ್ಮಲವಾದ ಹೆಣ್ತನವೊಂದುಳಿದಿತ್ತು. ತಂದೆ–ತಾಯಿ,

೧. ಪ್ರಬುದ್ಧ ಕರ್ನಾಟಕದ ೧೯೨೮ನೇ ಇಸವಿ ವಿಭವ ಸಂವತ್ಸರದ ೩೭ನೇ ಸಂಚಿಕೆ (ಸಂಕ್ರಾಂತಿ ಸಂಚಿಕೆ) ಪು: ೧೨, ೧೩, ೧೪, ೧೫ ಪ್ರಕಟಣೆ: ಸಂ.ಕಾ.ಕ.ಸಂ.

ಅಕ್ಕ-ತಂಗಿ, ಅಣ್ಣ-ತಮ್ಮ, ಗಂಡ-ಇನಿಯ, ತೊದಲು ಮಾತಿನ ಮಗು ಯಾರೂ ಇಲ್ಲವೇ? ಎಂದು ಪ್ರಶ್ನಿಸಿಕೊಳ್ಳುತ್ತಾರೆ ಕವಿ.

'ಅಯ್ಯೋ, ಏನನ್ಯಾಯ,
ತುಂಬಿದೀ ಊರಲ್ಲಿ,
ಮನೆ ಇವಳಿಗಿಲ್ಲ,
ತುಂಬಿದೀ ಜನದಲ್ಲಿ
ನೆರೆ ಇವಳಿಗಿಲ್ಲ.
ಅನಾಥೆ ಹಾ, ದಿಕ್ಕಿಲ್ಲ,
ಮರಣವೇ ಶರಣು.'

ಎಂದು ಕವಿ ಅವಳ ದುರ್ಮರಣಕ್ಕಾಗಿ ಸಂಕಟಪಡುತ್ತಾರೆ. ಯಾರೊಬ್ಬರ ಪ್ರೇಮವೂ ಇವಳನ್ನು ತಡೆಯದೇ ಹೋಯಿತೇ? ದೀನ ರಕ್ಷಕ ಇವಳ ಮೊರೆ ಕೇಳಿ ಕಾಪಾಡಲಿಲ್ಲವೇ? ಹುಚ್ಚು ಹಿಡಿಸಿದ ಹಾಳು ಬಾಳಿಗೆ ಬೇಸತ್ತು ಹೊಳೆಗೆ ಹಾರಿದಳೆ? ಎಂದೂ ಚಿಂತಿಸುತ್ತಾರೆ 'ಶ್ರೀ'ಯವರು.

ಅವಳ ಬಾಳನ್ನು ಹಾಳು ಮಾಡಿದವನನ್ನು ಬಂದು ಹೊಳೆಯಲ್ಲಿ 'ಮುಳುಗು ಬಾ, ಪಾಪಿ!' ಎಂದು ಕವಿ ಕರೆಯುತ್ತಾರೆ. ಕೋಮಲ ಕಾಯದ ಹೊಸ ಪ್ರಾಯದ ಹೆಣ್ಣಿನ ಈ ಸ್ಥಿತಿಗೆ ದೇವನಲ್ಲ, ಜನ ಮಾಡುವ ಹಿಂಸೆಯೇ ಕಾರಣ. ದುಃಖಿಗಳನ್ನೂ, ಪಾಪಿಗಳನ್ನೂ ಜನ ಧಿಕ್ಕರಿಸಿ ದೂರತಳ್ಳುತ್ತಾರೆ. ಆದರೆ ದೇವನು ಆ ರೀತಿ ಮಾಡಲಾರ. ತನ್ನ ಪಾಪವನ್ನು ಒಪ್ಪಿ ಈ ರೀತಿ ದೇವರ ಮೊರೆಹೋಗುವ ಅನಾಥರಿಗೆ ಮನದಲ್ಲೇ ಕೈಮುಗಿದು ದೇವರ ಬಳಿ ಕಳುಹಿಸಬೇಕೆಂದು 'ಶ್ರೀ'ಯವರು ಕವಿತೆಯ ಅಂತ್ಯದಲ್ಲಿ ಹೇಳುತ್ತಾರೆ.

ಸೆಂ.ಕಾ. ವಿದ್ಯಾರ್ಥಿಯಾದ ಕೆ. ಗೋಪಾಲಕೃಷ್ಣರಾವ್‌ರವರು, ಕನ್ನಡದ ಕಣ್ವ ಬಿ.ಎಂ.ಶ್ರೀ.ಯವರ ಕವನಕ್ಕೆ ಸ್ವಲ್ಪವಾದರೂ ಹೋಲಿಕೆ, ಹೊಂದಿಕೆಯಾಗಬಲ್ಲ ಕವಿತೆಯನ್ನು ರಚಿಸಿದ್ದಾರೆಂದು ಹೇಳಬಹುದು. ಆಗಿನ ವಿದ್ಯಾರ್ಥಿಗಳಲ್ಲಿದ್ದ ಸಾಹಿತ್ಯ ರಚನೆಯ ಆಸಕ್ತಿಗೆ ಸೆ.ಕಾ.ಕ.ಸಂ.ವು ಪ್ರಬುದ್ಧ ಕರ್ಣಾಟಕದ ಮೂಲಕ ಹೇಗೆ ಪ್ರೋತ್ಸಾಹದ ನೀರೆರೆಯುತ್ತಿತ್ತೆಂಬುದನ್ನು ಇದರಿಂದ ತಿಳಿಯಬಹುದಾಗಿದೆ. ಈ ಎರಡು ಕವಿತೆಗಳಿಂದ ನಿರಾಶ್ರಿತರಾದ ಅನಾಥ ಹೆಣ್ಣು ಮಕ್ಕಳನ್ನು ತಿರಸ್ಕರಿಸದೇ ಸಮಾಜವು ಆಶ್ರಯ ನೀಡಿ ಬಾಳಲು ಅವಕಾಶ ನೀಡಬೇಕೆಂಬ ಕೂಗು ಕೇಳಿ ಬರುತ್ತಿತ್ತೆಂದು ಹೇಳಬಹುದು. ಆ ಕೂಗೂ ಅಂದಿಗೂ-ಇಂದಿಗೂ ಪ್ರಸ್ತುತವಾಗಿದೆ.

'ಅನಾಥೆ' ಕವನವು ವಿಭಿನ್ನ ಶೈಲಿಯಿಂದ ಓದುಗರನ್ನು ಸೆಳೆಯುತ್ತದೆ. ತಾಯ್ತನವೆನ್ನುವುದು ಏಕೆ ಅಷ್ಟು ಮಹತ್ವ ಪಡೆದಿದೆಯೆಂದರೆ ಆಕೆಯನ್ನು ನಾವು ಬಿಟ್ಟುಬಿಡುತ್ತಿದ್ದೇವೆಂಬ ಭಾವ. 'ಅನಾಥೆ' ಮತ್ತು 'ದುಃಖಸೇತು'ವಿನಲ್ಲಿ ಕ್ರಿಶ್ಚಿಯನ್ ತತ್ವವನ್ನು ಕಾಣಬಹುದಾಗಿದೆ. ಅದೆಂದರೆ ಉಲ್ಲಂಘನೆಗಳನ್ನು ಅನುಕಂಪದಿಂದ ನೋಡುವುದು. ಇದು ಆಧುನಿಕ ಸಾಂಸ್ಕೃತಿಕ ಜೀವನದಲ್ಲಾಗುತ್ತಿದ್ದ ಮಹತ್ವದ ಬದಲಾವಣೆ ಎಂದು ಹೇಳಬಹುದು.

ಪಸ್ವಿನೀ

ಭಾರತಿಯವರಿಂದ ರಚಿತವಾದ 'ತಪಸ್ವಿನೀ'[೧] ನಾಟಕವು ರಾಮಾಯಣದ ಕಥೆಯನ್ನು ವಸ್ತುವಾಗಿಸಿರುವಂತಹುದು. ೪ ವರ್ಷ ವನವಾಸವನ್ನು ಮುಗಿಸಿಕೊಂಡು ರಾಮ–ಸೀತೆ–ಲಕ್ಷ್ಮಣರು, ಹನುಮಂತನ ಸಮೇತರಾಗಿ ಅಯೋಧ್ಯೆಗೆ ಂದಿರುಗಿದಾಗ ನಡೆದ ಕಥೆಯೇ ಪ್ರಸ್ತುತ ನಾಟಕದ ಸಂದರ್ಭ. ಮಹಾಕವಿ ವಾಲ್ಮೀಕಿಯಿಂದ ಆಧುನಿಕ ಕವಿಗಳವರೆಗಿನ ತಿಗಳಲ್ಲಿ ನಿರ್ಲಕ್ಷಿತವಾದ ಪಾತ್ರವೇ ಲಕ್ಷ್ಮಣನ ಪತ್ನಿಯಾದ ಊರ್ಮಿಳೆಯದ್ದು.

ಇಂತಹುದೇ ಸನ್ನಿವೇಶದಲ್ಲಿ ನಮ್ಮ ರಾಷ್ಟ್ರಕವಿಯಾದ ಕುವೆಂಪು ತಮ್ಮ 'ಶ್ರೀರಾಮಾಯಣದರ್ಶನಂ' ಮಹಾಕೃತಿಯಲ್ಲಿ ನಿಯೇ ಇಲ್ಲದ ಊರ್ಮಿಳೆಯ ಪಾತ್ರಕ್ಕೊಂದು ದನಿಯನ್ನು ನೀಡಿದ್ದಾರೆಂದು ಹೇಳಬಹುದು.

"ನೀರವಧ್ಯಾನವಧೂ ಹೇ ಊರ್ಮಿಳಾ ದೇವಿ
ಸೌಮಿತ್ರಿಯರ್ಧಾಂಗಿ, ಹೇಳು ನೀನಿಲ್ಲಿರ್ದೆ
ಕಡೆದ ಕಡಲೋಲಯೋಧ್ಯಾನಗರಿ ಮಸಗಿದಾ
ಕ್ರಾಂತಿ ದಿನದಂದು?......

ಪೆಣ್ತನಂ ತಾನೆ ನೀನಿಲ್ಲದೂರ್ಮಿಳೆಯಲ್ತು;
ಪೆಣ್ಣೆಂಬ ತಪಕೆ ನೀಂ ನಿರುಪಮ ಪ್ರತಿಮೆಯೌ!

.........................................

ತನ್ನ ಪತಿಗುರುತಪಕೆ ದೀಕ್ಷೆಯಿತ್ತುದನವಳ್,
ಸತಿಶಿರೋಮಣಿ, ಊರ್ಮಿಳಾದೇವಿ? ಪ್ರಾಣೇಶ

ಲಕ್ಷ್ಮಣಂ ರಾಮ ಸೀತೆಯೊರಡನಯೋಧ್ಯೆಯಂ
ಬಿಟ್ಟಂದು ತೊಟ್ಟು, ಸರಯೂ ನದಿಯ ತೀರದೊಳ್
ಪರ್ಣಕುಟಿಯಂ ರಚಿಸಿ ಚಿರ ತಪಸ್ವಿನಿಯಾಗಿ
ಕಟ್ಟಿದಳ್ ಚಿತ್ತಪೋಮಂಗಳದ ರಕ್ಷೆಯಂ
ಮೈಥಿಲಿಗೆ ರಾಮಂಗೆ ಮೇಣ್ ತನ್ನಿನಿಯ ದೇವನಿಗೆ!"[೨]

ಎಂದು ಊರ್ಮಿಳೆಯ ತಪಸ್ಸನ್ನು ಪತಿ ನಿಷ್ಠೆಯನ್ನು ತ್ಯಾಗವನ್ನೂ ಓದುಗರ ಮನಸೆಳೆಯುವಂತೆ ವರ್ಣಿಸಿದ್ದಾರೆ. ಗಕ್ಕೆ ಇನ್ನೊಂದು ಹೆಸರೇ ಊರ್ಮಿಳೆ ಅವಳು ತನ್ನ ತಪಸ್ಸಿನ ಮಂಗಳ ರಕ್ಷಣೆಯಿಂದ ರಾಮ–ಸೀತೆ–ಲಕ್ಷ್ಮಣರನ್ನು ೪ ವರ್ಷ ರಕ್ಷಿಸಿದಳೆಂದು ಕವಿ ಹೇಳುತ್ತಾರೆ.

---

ಪ್ರಕ. ೧೯೩೦ – ೪೩ನೇ (ವಿನಾಯಕನ) ಸಂಚಿಕೆ. ೬ನೇ ಲೇಖನ – ಪು. ಸಂ. ೧ ರಿಂದ ೧೮.

ಕುವೆಂಪು – ಶ್ರೀ ರಾಮಾಯಣ ದರ್ಶನಂ – ಅಯೋಧ್ಯಾ ಸಂಪುಟ ೪ – ಊರ್ಮಿಳಾ – ಪು. ಸಂ. ೧೦೦, ೧೦೧ – ಪ್ರ – ಕನ್ನಡ ಮತ್ತು ಸಂಸ್ಕೃತಿ ಇಲಾಖೆ – ೨೦೧೧.

ಸರಯೂ ನದಿಯ ತೀರದಲ್ಲಿ, ರಾಜೋದ್ಯಾನ ಸೀಮಾಂತರದಲ್ಲಿ ಒಂದು ಕುಟೀರವನ್ನು ಕಟ್ಟಿಕೊಂಡು, ನಾರುಡುಗೆಯನ್ನುಟ್ಟ ಸತಿ ಊರ್ಮಿಳೆಯೇ ಇಲ್ಲಿನ 'ತಪಸ್ವಿನೀ'. ಪತಿಯಾದ ಲಕ್ಷ್ಮಣನು ಅಣ್ಣ ರಾಮ, ಅತ್ತಿಗೆ ಸೀತೆಯೊಡಗೂಡಿ ೧೪ ವರ್ಷಗಳನ್ನು ವನವಾಸದಲ್ಲಿ ಕಳೆಯುತ್ತಾನೆ. ಆ ಸಂದರ್ಭದಲ್ಲಿ ಸತಿ ಊರ್ಮಿಳೆ ತನ್ನ ಪತಿಗಾಗಿ ಕಾಯುತ್ತ ತಪಸ್ವಿನಿಯಂತೆ ಜೀವಿಸುತ್ತಾಳೆ. ತನ್ನ ಕುಟೀರದ ಸುತ್ತಮುತ್ತಲಿನ ಪ್ರಾಣಿಪಕ್ಷಿಗಳನ್ನು ತಾಯ ಪ್ರೀತಿಯಿಂದ ಸಲಹುತ್ತಿರುತ್ತಾಳೆ. ಈ ನಾಟಕದ ಆರಂಭದ ದೃಶ್ಯವು ಶ್ರೀರಾಮ-ಸೀತಾ-ಲಕ್ಷ್ಮಣರು ೧೪ ವರ್ಷದ ವನವಾಸವನ್ನು ಮುಗಿಸಿ ಅಯೋಧ್ಯೆಗೆ ಹಿಂದಿರುಗುವ ದಿನದಂದೇ ಆರಂಭವಾಗುತ್ತದೆ. ಜನರೆಲ್ಲಾ ಅವರನ್ನು ನೋಡಲು ಓಡುತ್ತಿರುತ್ತಾರೆ. ಮರಿಗಾಗಿ ಹಂಬಲಿಸುತ್ತಿದ್ದ ಜಿಂಕೆಯೊಂದನ್ನು ಊರ್ಮಿಳೆ ಸಮಾಧಾನಪಡಿಸಿ ಲಕ್ಷ್ಮಣನಿಗಾಗಿ ಕಾತಳಾಗಿರುವಾಗ ಚಿಗರೆ ಮರಿಯೊಡನೆ ಅವನ ಆಗಮನವಾಗುತ್ತದೆ. ಅಗಲಿಕೆಯ ಪರಿತಾಪವನ್ನು ಊರ್ಮಿಳೆ ಎಂತು ಸಹಿಸಿದಳೋ, 'ಎಂತೆಸಗಿದಳೋತಪವ? ಎನಿತು ಬಳಲಿದಳೋ? ಚಪಲೆ ಈಗಲ್ಲ. ಸತಿ ಧೀರಮತಿಯಾಗಿಹಳು!' 'ಧನ್ಯಳು ನೀನು ಊರ್ಮಿಳಾ! ಬಂದೆನಿದೋ! ನೀಡು; ಶಾಂತಿಯ ಭಿಕ್ಷೆ ಬೇಡುವೆನು' ಎಂದು ಮನದಲ್ಲಿ ಹೇಳುತ್ತಾ ಬರುತ್ತಾನೆ. ಸತಿಪತಿಗಳು ಪರಸ್ಪರ ಮಾತನಾಡುತ್ತಾ ಸಂತಸ ಸಂಭ್ರಮಪಡುತ್ತಾರೆ. ಊರ್ಮಿಳೆ ತನ್ನ ಪತಿಯ ಚರಣಗಳಿಗೆರಗಿ ಆಶೀರ್ವದ ಪಡೆಯುತ್ತಾಳೆ. 'ಅವಳ ಮನದುನ್ನತಿಯು, ಸ್ಥೈರ್ಯವು, ಶ್ರದ್ಧೆಯು ಅದ್ಭುತ'ವೆಂದು ಲಕ್ಷ್ಮಣ ಹೊಗಳುತ್ತಾನೆ. 'ಉಭಯ ಜೀವನ ಶೋಧನೆಗೊಂದು ಅವಕಾಶಮಾಯ್ತು' ಎಂದು ಊರ್ಮಿಳೆ ಹೇಳುತ್ತಾಳೆ.

ನಂತರ ಲಕ್ಷ್ಮಣನಿಂದ ೧೪ ವರ್ಷ ವನವಾಸದ ಕತೆಯನ್ನು ಕೇಳಿ ತಿಳಿಯುತ್ತಾಳೆ. ವನವಾಸ – ಪಂಚವಟಿ – ಶೂರ್ಪನಖಿ – ಮಾಯಾಮೃಗ – ಸೀತಾಪಹರಣ – ಕಿಷ್ಕಿಂಧೆ – ವಾಲಿ – ಹನುಮಂತ – ರಾಮ ರಾವಣ ಯುದ್ಧ – ಅಗ್ನಿಪರೀಕ್ಷೆ ಎಲ್ಲವನ್ನು ವಿವರಿಸುತ್ತಾನೆ.

ಊರ್ಮಿಳೆ ತಪದಿಂದ ಬಳಲಿದಳೇ? ಎಂದು ಸೌಮಿತ್ರಿ ಪ್ರಶ್ನಿಸುತ್ತಾನೆ. 'ಬಳಲಿದೆನಿಲ್ಲ, ವೇದನೆಯನರಿಯೆ; ಭ್ರಮೆ ಇಲ್ಲ; ಬೇಸರಮೆ ಇಲ್ಲ. ಧರ್ಮವ ಬಗೆದೆ, ಪ್ರಕೃತಿಯಲಿ, ವಿಶ್ವ ಪ್ರೇಮದಲಿ, ಬೆರೆದೆನು ದೇವ' ಎಂದು ಹೇಳುತ್ತಾಳೆ. ಲಕ್ಷ್ಮಣ 'ನೋವ ನೀಗುತೆ ಜೀವವನು ಕಾವ ಸದ್ವಿಜಯ ಜೀವನದ ಸಂಸ್ಕಾರ; ಸತ್ವ; ನಿನ್ನದು ದೇವಿ! ರಕುತ ಪಾನದ ತೋಳ ಗೆಲುವೊಂದುಗೆಲುವೆ? ನಿನ್ನ ಗೆಲುವೇ ಚೆಲುವು, ಶಾಂತಿ ನೀಡೆನಗೆ. ನಿನ್ನ ನೈರ್ಮಲ್ಯದಿಂದೆನ್ನ ಮಲಿನವ ನೀಗು. ನಿನ್ನ ಬಗೆಯೆನಗೆ ವಿಶ್ರಾಂತಿ ಮಂದಿರವು. ಮತಿವೆರಸಿ ಹಿತವೀವ ಪ್ರೇಮನಿಧಿ ನೀನು' ಎಂದು ಸತಿ ಊರ್ಮಿಳೆಯನ್ನು ಹೊಗಳುತ್ತಾನೆ. ನಂತರ ರಾಮ-ಸೀತೆಯರ ಆಗಮನ. ಇಬ್ಬರೂ ಲಕ್ಷ್ಮಣ-ಊರ್ಮಿಳೆಯರ ಗುಣಗಾನ ಮಾಡುತ್ತಾ ಅವರನ್ನು ಕರೆತರಲು ಹನುಮಂತನನ್ನು ಕಳುಹುತ್ತಾರೆ. ನಂತರ ರಾಮ-ಸೀತೆಯರೇ ಅವರಿದ್ದಲ್ಲಿಗೆ ಬರುತ್ತಾರೆ. ಸೀತೆ ಊರ್ಮಿಳೆಗೆ 'ನಿನ್ನ ತ್ಯಾಗದ ಮುಂದೆ ತಪಮೆಲ್ಲಿ ತಂಗಿ! ಮೋಕ್ಷಗಾಮಿಯು ನಿನ್ನ ಪತಿಯವಗೆ ತೋರಿಸಿದೆ ಮುಕ್ತಿಕಾಂತಿಯ ನೀನು. ಮನದ ಜಯವೇ ಜಯವು. ಜಗದ ಜಯವದಕೆ ವಶ' ಎಂದು ಹೇಳುತ್ತಾಳೆ. ರಾಮ-ಸೀತೆಯರೂ, ಊರ್ಮಿಳೆಯನ್ನು ಸುಖಶಾಂತಿ ನೀಡಲು ಮನೆಗೆ ಬರುವಂತೆ ಕೋರುವರು.

ಅಯೋಧ್ಯೆಯ ಜನಕ್ಕೆ ಸುಖಶಾಂತಿ ನೀಡಲೂ, ಲೋಕಮಂಗಳ ಕಾರಣದ ವಿಜಯ ಕೀರ್ತಿಗಾಗಿ, ಕಾತರಿಸುತ್ತಿರುವ ಹಿರಿಯರಿಗಾಗಿ ಬರಬೇಕೆಂದು ಊರ್ಮಿಳೆಯ ಮನ ಒಲಿಸುವರು. ರಾಮ, ಸೀತೆ, ಲಕ್ಷ್ಮಣ, ಹನುಮಂತ ಇವರೆಲ್ಲರಿಗಿಂತ ಇಲ್ಲಿ ಊರ್ಮಿಳೆಯ ಪಾತ್ರವೇ ಭವ್ಯವಾಗಿ-ದಿವ್ಯವಾಗಿ ಪ್ರಜ್ವಲಿಸುತ್ತದೆ. ರಾಮಾಯಣದ ನಿರ್ಲಕ್ಷಿತ ಪಾತ್ರಕ್ಕೆ ಇಲ್ಲಿ ವಿಶೇಷ ಹೊಳಪು ಬಂದಿದೆ.

ಮಾನವತಾವಾದ ಹಾಗೂ ಉದಾರವಾದದ ಮೂಲಕ ಹೆಣ್ಣಿನ ವ್ಯಕ್ತಿತ್ವವನ್ನು ಶ್ರೇಷ್ಠತೆಗೆ ಏರಿಸುವ ಸನ್ನಿವೇಶವನ್ನು ಇಲ್ಲಿ ಕಾಣಬಹುದಾಗಿದೆ. ಆ ಮೂಲಕ ಪ್ರಬುದ್ಧ ಕರ್ನಾಟಕದ, ಸೆಂ.ಕಾ.ಕ.ಸಂ.ದ ಆಧುನಿಕ ವಿಚಾರಧಾರೆಗಳು ನಡೆಯುತ್ತಿದ್ದ ಹೊಸ ರೂಪವನ್ನು ಈ ನಾಟಕದಲ್ಲಿ ಕಾಣಬಹುದಾಗಿದೆ.

## ಶಕುಂತಳಾ, ಮಿರಾಂಡಾ ಮತ್ತು ಡೆಸ್ಡಿಮೋನಾ

ಈ ಅಧ್ಯಾಯದ ಕೊನೆಯದಾಗಿ ನಾವು ನೋಡಲಿರುವ ಲೇಖನ ಬಂಕಿಮಚಂದ್ರ ಚಟ್ಟೋಪಾಧ್ಯಾಯರಿಂದ ಬಂಗಾಳಿ ಭಾಷೆಯಲ್ಲಿ ಬರೆಯಲ್ಪಟ್ಟ ಪ್ರಬಂಧದ ಭಾಷಾಂತರ. ಭಾಷಾಂತರಿಸಿದವರು ಹೊಸಗನ್ನಡದ ಅಶ್ವಿನೀ ದೇವತೆಗಳಲ್ಲಿ ಒಬ್ಬರಾದ ಟಿ.ಎಸ್. ವೆಂಕಣ್ಣಯ್ಯನವರು. ಪ್ರಬಂಧದ ಹೆಸರು ಶಕುಂತಳಾ, ಮಿರಾಂಡಾ ಮತ್ತು ಡೆಸ್ಡಿಮೋನಾ.[೧]

ಶಕುಂತಳಾ, ಮಿರಾಂಡಾ ಇಬ್ಬರು ಋಷಿ ಕನ್ಯೆಯರು. ವಿಶ್ವಾಮಿತ್ರ, ಪ್ರಾಸ್ಪರೋ ಇವರಿಬ್ಬರೂ ರಾಜರ್ಷಿಗಳು. ಋಷಿಕನ್ಯೆಯರಾದ್ದರಿಂದ ಇಬ್ಬರಿಗೂ ಅಮಾನುಷಿಕ ಸಹಾಯವಿತ್ತು. ಇಬ್ಬರೂ ವನಲತೆಗಳು, ಅರಣ್ಯ ಮಧ್ಯದಲ್ಲಿ ಬೆಳೆದವರು, ಸರಳತೆಯ ಸಿದ್ಧಿಯನ್ನು ಪಡೆದವರು. ಪುರುಷರನ್ನು ಯಾವ ರೀತಿ ಜಯಿಸಬಹುದೆಂಬ ಚಿಂತೆ ಇವರಿಬ್ಬರಿಗೂ ಇರಲಿಲ್ಲ. ಶಕುಂತಲೆ ನವಮಲ್ಲಿಕೆಯಂತೆ ಶುಭ್ರಳೂ, ನಿಷ್ಕಳಂಕಳೂ, ಪ್ರಫುಲ್ಲಳೂ, ದಿಗಂತ ಸುಗಂಧ ವಿಕೀರ್ಣಕಾರಿಣಿಯೂ ಆಗಿದ್ದಳು. ಆಕೆಯ ಭಗಿನೀ ಸ್ನೇಹ ನವಮಲ್ಲಿಕೆಯ ಮೇಲೆ; ಭ್ರಾತೃ ಸ್ನೇಹ ಸಹಕಾರದ ಮೇಲೆ; ಪುತ್ರ ಸ್ನೇಹವು ಮಾತೃವಿಹೀನವಾದ ಹರಿಣ ಶಿಶುವಿನ ಮೇಲೆ; ಪತಿಗೃಹಕ್ಕೆ ಹೋಗುವಾಗ ಇವುಗಳಿಂದ ಅಪ್ಪಣೆಯನ್ನು ತೆಗೆದುಕೊಂಡು ಶಕುಂತಳೆಯು ಅಶ್ರುಮುಖಿಯೂ, ಕಾತರಳೂ, ವಿವಶಳೂ ಆದಳು. ಆದರೆ ಶಕುಂತಳೆ ಸರಳೆಯಾದರೂ ಅಶಿಕ್ಷಿತಳಲ್ಲ. ಆಕೆಯ ಶಿಕ್ಷಣದ ಚಿಹ್ನೆ ಲಜ್ಜೆಯೇ; ಲಜ್ಜೆಯು ಆಕೆಯ ಚರಿತ್ರೆಯಲ್ಲಿ ಬಹಳ ಪ್ರಬಲವಾದುದು. ಮಾತನಾಡುವಾಗ ದುಷ್ಯಂತನ ಸಮ್ಮುಖದಲ್ಲಿ ಅನವತಮುಖಿಯಾಗುತ್ತಿದ್ದಳು. ಲಜ್ಜೆಯಿಂದ ತನ್ನ ಹೃದಯದಲ್ಲಿದ್ದ ಪ್ರಣಯವನ್ನು ಸಖಿಯರ ಎದುರಿಗೂ ಹೇಳಲಾರದವಳಾಗಿದ್ದಳು, ವ್ಯಕ್ತಪಡಿಸಲಾರದವಳಾಗಿದ್ದಳು.

ಆದರೆ ಮಿರಾಂಡಳು ಹಾಗಲ್ಲ; ಮಿರಾಂಡಳು ಎಷ್ಟು ಸರಳೆಯೆಂದರೆ ಆಕೆಗೆ ಲಜ್ಜೆ ಕೂಡ ಇರಲಿಲ್ಲ. ಲಜ್ಜೆ ಎಲ್ಲಿಂದ ಬರಬೇಕು? ತನ್ನ ತಂದೆಯನ್ನು ಹೊರತು ಬೇರೆ ಮನುಷ್ಯರನ್ನು ಆಕೆಯು ಎಂದೂ ನೋಡಿರಲಿಲ್ಲ. ಮೊದಲು ಫರ್ಡಿನೆಂಡನನ್ನು ನೋಡಿ ಅವನು ಏನೆಂಬುದನ್ನು ತಿಳಿಯದವಳಾಗಿದ್ದಳು.

'Lord! How it looks about ! believe me Sir, It carries a brave form but it is a spirit'

ಸಮಾಜವು ಕೊಡುವ ಸಮಸ್ತ ಸಂಸ್ಕಾರವೂ ಶಕುಂತಳೆಯಲ್ಲಿದೆ. ಮಿರಾಂಡಳಲ್ಲಿ ಸ್ವಲ್ಪವಾದರೂ ಇಲ್ಲ. ತಂದೆಯೆದುರು ಸ್ವಲ್ಪವೂ ಸಂಕೋಚವಿಲ್ಲದೇ ಯಾವುದೇ ಚಿತ್ರವನ್ನು ಪ್ರಶಂಸಿಸುವಂತೆ ಫರ್ಡಿನೆಂಡನನ್ನು

"I might call him a thing divine; for nothing natural I ever saw so noble"

ಎಂದು ಪ್ರಶಂಸಿಸುತ್ತಾಳೆ. ಆದರೂ ಯಾವುದು ಸ್ವಾಭಾವಿಕವಾದ ಸ್ತ್ರೀ ಚರಿತ್ರೆಯ ಪವಿತ್ರತೆಯೋ, ಯಾವುದು

---

ಟಿ.ಎಸ್. ವೆಂಕಣ್ಣಯ್ಯ – ಪ್ರ.ಕ.ದ ೧೯೨೩ನೇ ಇಸವಿ ದುಂದುಭಿ ಸಂವತ್ಸರದ ೧೪ನೇ (ಕಾಮನ)ಸಂಚಿಕೆ – ಸಂಪುಟ ೪ – ೪ನೇ ಲೇಖನ.

ಲಜ್ಜೆಯಲ್ಲಿ ಲಜ್ಜೆಯೋ ಮಿರಾಂಡಳಲ್ಲಿ ಅದರ ಅಭಾವವಿಲ್ಲ. ಆದಕಾರಣ ಶಕುಂತಳೆಯ ಸರಳತೆಗಿಂತಲೂ ಮಿರಾಂಡಳ ಸರಳತೆ ನವೀನ ಹಾಗೂ ಮಾಧುರ್ಯವೂ ಅಧಿಕ.

ಮಿರಾಂಡಳು ರಾಜಪುತ್ರನನ್ನು ನೋಡಿದಾಗ ಆಕೆಯ ಹೃದಯವು ಪ್ರಣಯ ಸಂಸ್ಪರ್ಶ ಶೂನ್ಯವಾಗಿತ್ತು. ಶಕುಂತಳೆಯೂ ರಾಜನನ್ನು ನೋಡಿದಾಗ ಶೂನ್ಯ ಹೃದಯಳಾಗಿದ್ದಳು. ತಪೋವನದಲ್ಲಿ ಬೆಳೆದ ಇಬ್ಬರೂ ಅನುರೂಪನಾಯಕರನ್ನು ನೋಡಿದ ಕೂಡಲೇ ಪ್ರಣಯವನ್ನು ಹೊಂದಿದರು. ಆದರೆ ಕವಿಗಳ ಕೌಶಲ ಎಷ್ಟು ಆಶ್ಚರ್ಯಕರವಾದದ್ದು! ಎಂದು ಪ್ರಬಂಧಕಾರರೇ ಅಚ್ಚರಿಪಡುತ್ತಾರೆ. ಏಕೆಂದರೆ ಪರಾಮರ್ಶಪೂರ್ವಕವಾಗಿ ಕವಿಗಳು ಶಕುಂತಳಾ ಮತ್ತು ಮಿರಾಂಡರ ಚರಿತ್ರೆ ರಚನೆಯಲ್ಲಿ ಪ್ರವೃತ್ತರಾಗಲಿಲ್ಲ. ಆದರೂ ಒಬ್ಬನೇ ಎರಡು ಚಿತ್ರಗಳನ್ನು ಚಿತ್ರಿಸಿದ್ದರೆ ಹೇಗಾಗುತ್ತಿತ್ತೋ ಹಾಗಾಗಿದೆ.

ದುಷ್ಯಂತನನ್ನು ನೋಡಿದ ಮೇಲೆಯೇ ಶಕುಂತಲೆಯು ಪ್ರಣಯಾಸಕ್ತಳಾದುದು. ತನ್ನ ಸಖಿಯರು ಬಲವಂತದಿಂದ ಪೀಡಿಸಿ ಕೇಳುವ ತನಕ ಶಕುಂತಲೆ ಒಂದು ಮಾತನ್ನೂ ಹೇಳಿರಲಿಲ್ಲ. ಆ ಭಾವ ವ್ಯಕ್ತವಾದದ್ದು ಇಂಗಿತದಿಂದ ಮಾತ್ರ. ಆದರೆ ಮಿರಾಂಡಾ ಮೊದಲು ಫರ್ಡಿನೆಂಡನನ್ನು ನೋಡಿದಾಗ ನಿಸ್ಸಂಕೋಚವಾಗಿ ತಂದೆಯೆದುರು ತನ್ನ ಪ್ರಣಯವನ್ನು ವ್ಯಕ್ತಪಡಿಸಿದಳು. ತಂದೆಯು ಫರ್ಡಿನೆಂಡನನ್ನು ಪೀಡಿಸಬಾರದೆಂದು ದಯೆ ಹುಟ್ಟಿಸಲು ಪ್ರಯತ್ನಪಟ್ಟಳು. ಮೊದಲು ಅವನನ್ನು ನೋಡಿದ ಕೂಡಲೇ ಫರ್ಡಿನೆಂಡನಿಗೆ ತನ್ನ ಆತ್ಮ ಸಮರ್ಪಣೆ ಮಾಡಿದಳು. ಆದರೆ ದುಷ್ಯಂತನಲ್ಲಿ ಶಕುಂತಲೆಯ ಪ್ರಥಮ ಪ್ರಣಯ ಸಂಭಾಷಣೆಯು ಒಂದು ಬಗೆಯ ಕಣ್ಣಾಮುಚ್ಚಾಲೆಯಾಟ. 'ಸಖಿ, ರಾಜನನ್ನು ಏಕೆ ತಡೆಯುತ್ತಿ?' 'ಹಾಗಾದರೆ ನಾನು ಎದ್ದು ಹೋಗುತ್ತೇನೆ' 'ನಾನು ಈ ಮರದ ಹಿಂದೆ ಅವಿತುಕೊಳ್ಳುತ್ತೇನೆ' ಶಕುಂತಲೆಯಲ್ಲಿ ಈ ನಟನೆಗಳೆಲ್ಲವೂ ಇವೆ. ಆದರೆ ಮಿರಾಂಡಳಲ್ಲಿ ಇವಾವುವೂ ಇಲ್ಲ. ಅವಳು ವನದ ಪಕ್ಷಿ – ಪ್ರಾತಃಕಾಲದ ಅರುಣೋದಯದಲ್ಲಿ ಗಾನ ಮಾಡುತ್ತಾ ಹಾರಾಡುವುದರಲ್ಲಿ ಅದಕ್ಕೆ ಲಜ್ಜೆಯಿಲ್ಲ.

ಉದ್ಯಾನದಲ್ಲಿ ರೋಮಿಯೋ ಜೂಲಿಯಟ್‌ರ ಜಗತ್ಪ್ರಖ್ಯಾತವಾದ ಪ್ರಣಯ ಸಂಭಾಷಣೆಗಿಂತಲೂ ಮಿರಾಂಡ–ಫರ್ಡಿನೆಂಡರ ಪ್ರಣಯ ನ್ಯೂನವಾದದ್ದಲ್ಲ. 'ನನ್ನ ದಾನವು ಸಾಗರದಂತೆ ಮೇರೆಯಿಲ್ಲದ್ದು. ನನ್ನ ಪ್ರೀತಿಯೂ ಸಾಗರದಂತೆಯೇ ಗಂಭೀರವಾದುದು' ಎಂದು ಜೂಲಿಯಟ್ಟಳು ಹೇಳಿದ ದೊಡ್ಡ ಮನೋಭಾವದಿಂದಲೇ ಮಿರಾಂಡಳು ತುಂಬಿದ್ದಳು.

ಯಾವ ನೀರನ್ನು ಹಾಕಿದ್ದರಿಂದ ಮಿರಾಂಡ, ಜೂಲಿಯಟ್‌ಗಳು ಅರಳಿದುವೋ ಅದೇ ನೀರನ್ನು ಹಾಕಿದ್ದರಿಂದ ಶಕುಂತಳೆಯು ಅರಳಲಿಲ್ಲ – ಇದನ್ನು ಜ್ಞಾಪಕದಲ್ಲಿಟ್ಟುಕೊಳ್ಳದವರು ಶಕುಂತಲೆಯ ಚರಿತ್ರೆಯನ್ನು ತಿಳಿದುಕೊಳ್ಳಲಾರರು. ನಮ್ಮ ದೇಶದ ಕುಲಸ್ತ್ರೀಯಾದ ಶಕುಂತಲೆಯು ನಾಚಿಕೆಯಲ್ಲಿ ಮುಳುಗಿ ಸುಮ್ಮನಿದ್ದಳು. ಮಿರಾಂಡ ವಿಲಾಯಿತಿ ಹೆಂಗಸಾದ್ದರಿಂದ ತನ್ನ ಮನಸ್ಸನ್ನು ಬಿಚ್ಚಿ ಹೇಳಿದಳೆನ್ನುವುದು ಸರಿಯಲ್ಲ. ದೇಶಭೇದ, ಕಾಲಭೇದಗಳಿಂದ ಆಂತರ ಭೇದಗಳುಂಟಾಗುವುದೆಂದು ಹೇಳುವವರು ಕ್ಷುದ್ರಬುದ್ಧಿಯುಳ್ಳ ವಿಮರ್ಶಕರು. ಮನುಷ್ಯ ಹೃದಯವು ಸಕಲ ದೇಶದಲ್ಲಿಯೂ, ಸಕಲ ಕಾಲದಲ್ಲಿಯೂ ಒಳಗೆ ಮನುಷ್ಯ ಹೃದಯವೇ ಆಗಿರುತ್ತದೆ.

ಶಕುಂತಲೆಯು ದುಷ್ಯಂತನ ಸಭಾಪ್ರದೇಶದಲ್ಲಿ ನಿಂತುಕೊಂಡು ಅವನನ್ನು ತಿರಸ್ಕರಿಸುತ್ತ – "ಅನಾರ್ಯ! ನಿನ್ನ

ಹೃದಯಾನುಸಾರವಾಗಿ ಇತರರನ್ನೂ ನೋಡುತ್ತೀಯೋ?" ಎಂದು ಕೇಳಿದವಳು ಲತಾಮಂಟಪದಲ್ಲಿ ಬಾಲಕಿಯಾಗಿಯೇ ಇದ್ದಳು. ಅದಕ್ಕೆ ಕಾರಣ ದುಷ್ಯಂತನ ಚರಿತ್ರದ ಮಹತ್ವ, ಶಕುಂತಲೆಯು ಸಭಾ ಪ್ರದೇಶದಲ್ಲಿ ಪರಿತ್ಯಕ್ತಳಾದಾಗ ಅವಳು ಪತ್ನಿ, ರಾಜಮಹಿಷಿ, ಜನನೀ ಪದವಿಗೆ ಹತ್ತುತ್ತಿದ್ದವಳು. ಆದ್ದರಿಂದ ಶಕುಂತಲೆಯು ಆಗ ರಮಣೀ; ಇಲ್ಲಿ ತಪೋವನದಲ್ಲಿ ತಪಸ್ವಿ ಕನ್ಯೆ; ರಾಜಪ್ರಸಾದವನ್ನು ಅನುಚಿತವಾಗಿ ಅಪೇಕ್ಷಿಸುತ್ತಿದ್ದವಳು – ಇಲ್ಲಿ ಶಕುಂತಲೆ ಯಾರು? ಆನೆಯ ಸೊಂಡಿಲಿಗೆ ಸಿಕ್ಕಿರುವ ಪದ್ಮ ಮಾತ್ರ ಒಟ್ಟಿನಲ್ಲಿ ಶಾಕುಂತಲದ ಕವಿಯು ಟೆಂಪೆಸ್ಟಿನ ಕವಿಗಿಂತಲೂ ಹೀನ ತೇಜಸ್ವಿನವನಲ್ಲ ವೆಂಬುದನ್ನು ತೋರಿಸುವುದೇ ತಮ್ಮ ಪ್ರಯತ್ನದ ಉದ್ದೇಶವೆಂದು ಪ್ರಬಂಧಕಾರರು ಹೇಳಿದ್ದಾರೆ. ಕಾಳಿದಾಸನ ಕೃತಿ ರಚನೆಯ ಬಗ್ಗೆ ಹೆಮ್ಮೆ ಪಟ್ಟಿದ್ದಾರೆ.

**ಶಕುಂತಲಾ ಮತ್ತು ಡೆಸ್ಡಿಮೋನಾ**

ಮಿರಾಂಡಳೊಂದಿಗಿನ ಹೋಲಿಕೆಯಲ್ಲಿ ಶಕುಂತಳೆಯ ಚರಿತ್ರೆಯ ಒಂದು ಭಾಗ ಗೊತ್ತಾದರೆ, ಡೆಸ್ಡಿಮೋನಾಳೊಂದಿಗೆ ಹೋಲಿಸಿದಾಗ ಅವಳ ಇನ್ನೊಂದು ಭಾಗ ತಿಳಿಯುತ್ತದೆ.

೧. ಇಬ್ಬರೂ ಗುರುಜನರನ್ನಪೇಕ್ಷಿಸದೇ ಆತ್ಮ ಸಮರ್ಪಣ ಮಾಡಿದರು.

೨. ಇಬ್ಬರೂ ವೀರಪುರುಷರನ್ನು ನೋಡಿ ಆತ್ಮಸಮರ್ಪಣೆ ಮಾಡಿದರು. ಇಬ್ಬರ "ದುರಾರೋಹಿಣೀ ಆಶಾಲತೆ"ಯೂ ಮಹಾಮಹೀರುಹವನ್ನು ಅವಲಂಬನ ಮಾಡಿತು. ಆದರೆ ವೀರ ಮಂತ್ರದ ಮೋಹವು ಡೆಸ್ಡಿಮೋನಾಳಲ್ಲಿ ಪರಿಸ್ಫುಟವಾದ ಹಾಗೆ ಶಕುಂತಲೆಯಲ್ಲಾಗುವುದಿಲ್ಲ.

೩. ಇಬ್ಬರೂ ನಾಯಕಿಯರೂ ಕೊನೆಗೆ ತಮ್ಮ ಪತಿಗಳಿಂದ ಪರಿತ್ಯಕ್ತರಾದರು. ಅನೇಕ ವೇಳೆ ಪ್ರಪಂಚದಲ್ಲಿ ಯಾರು ಆದರಕ್ಕೆ ಯೋಗ್ಯರೋ, ಅವರೇ ವಿಶೇಷವಾಗಿ ಅನಾದರ ಅತ್ಯಾಚಾರಗಳಿಂದ ಪೀಡಿತರಾಗುವುದೂ ಉಂಟು.

೪. ಇಬ್ಬರೂ ಪರಮಸ್ನೇಹಶಾಲಿಗಳು, ಇಬ್ಬರೂ ಪತಿವ್ರತೆಯರು. ಪತಿಚಿಂತಾಮಗ್ನಳಾದ ಶಕುಂತಳೆಯು ದೂರ್ವಾಸರ ಭಯಂಕರವಾದ "ಅಯಮಹಂಭೋಃ" ಎಂಬ ಶಬ್ದವನ್ನು ಕೇಳಲಾರದವಳಾಗಿದ್ದಳು. ಸ್ವಾಮಿಯು ತನ್ನನ್ನು ಪರಿತ್ಯಾಗ ಮಾಡಿದಾಗ ಮೆಟ್ಟಿದ ಹಾವಿನಂತೆ ತಲೆಯನ್ನೆತ್ತಿ ತಿರಸ್ಕಾರ ಮಾಡಿದಳು. ರಾಜನು ಅವಳನ್ನು ಹಾಸ್ಯ ಮಾಡಿದಾಗ ಕ್ರೋಧದಿಂದ "ಅನಾರ್ಯ! ನಿನ್ನ ಹೃದಯಭಾವದಿಂದಲೇ ಎಲ್ಲರನ್ನೂ ನೋಡುವೆಯಾ?" ಎಂದು ಪ್ರಶ್ನಿಸಿದಳು. ಈ ಗುಣಗಳು ಡೆಸ್ಡಿಮೋನಳಲ್ಲಿಲ್ಲ. ಒಥೆಲೋ ನಿರಪರಾಧಿಯಾದ ಅವಳನ್ನು 'ಜಾರೆ'ಯೆಂದು ಅಪಮಾನಪಡಿಸಿದಾಗಲೂ ಡೆಸ್ಡಿಮೋನಳು "ನಾನು ನಿರಪರಾಧಿ ಎಂಬುದು ಈಶ್ವರನಿಗೆ ಗೊತ್ತಿದೆ" ಎಂದು ಹೇಳಿದಳೇ ಹೊರತು ಮತ್ತೇನೂ ಹೇಳಲಿಲ್ಲ.

ಒಥೆಲೋ ಭಯಂಕರ ರಾಕ್ಷಸನಂತೆ ರಾತ್ರಿ ಹಾಸಿಗೆಯ ಮೇಲೆ ಮಲಗಿದ್ದ ಸುಂದರಿಯ ಎದುರಿಗೆ "ಕಡಿದು ಹಾಕುತ್ತೇನೆ" ಎಂದು ನಿಂತಾಗಲೂ ಕೋಪವಿಲ್ಲ ಅಭಿಮಾನವಿಲ್ಲ; ಅವಿನಯ ಅಥವಾ ಆ ಸ್ನೇಹವಿಲ್ಲ. ಡೆಸ್ಡಿಮೋನಳು "ಹಾಗಾದರೆ ಈಶ್ವರನು ನಮ್ಮನ್ನು ರಕ್ಷಿಸಲಿ" ಎಂಬುದಾಗಿ ಮಾತ್ರ ಹೇಳಿದಳು. ಡೆಸ್ಡಿಮೋನಳು ಜನಗಳ ಎದುರಿಗೆ ತನ್ನ ಪತಿಯು ತನ್ನನ್ನು ಅಪರಾಧವಿಲ್ಲದೆಯೇ ವಧೆ ಮಾಡಿದನೆಂದೂ ಹೇಳಿಕೊಳ್ಳಲಿಲ್ಲ.

ಆದ್ದರಿಂದಲೇ ಡೆಸ್ಡಿಮೋನಳೊಂದಿಗೆ ಶಕುಂತಳೆಯು ತುಲನೀಯಳೂ ಹೌದು; ತುಲನೀಯಳಲ್ಲ ಎನ್ನುತ್ತಾರೆ ಪ್ರಬಂಧಕಾರರು. ಏಕೆಂದರೆ ಎಲ್ಲರಿಗೂ ತಿಳಿದಿರುವಂತೆ ಭಿನ್ನ ಜಾತಿಯ ವಸ್ತುಗಳಲ್ಲಿ ತುಲನೆಯಾಗುವುದಿಲ್ಲ. ಷೇಕ್ಸ್‌ಪಿಯರನ ನಾಟಕ ಸಾಗರ ಸದೃಶವಾದರೆ ಕಾಳಿದಾಸನ ನಾಟಕ ನಂದನವನವನ್ನು ಹೋಲತಕ್ಕದ್ದು. ವನಕ್ಕೂ ಸಾಗರಕ್ಕೂ ತುಲನೆಯಾಗದು.

ಭರತಖಂಡದಲ್ಲಿ ಯಾವುದನ್ನು ನಾಟಕವೆಂದು ಕರೆಯುತ್ತಾರೋ ಯೂರೋಪಿನಲ್ಲಿಯೂ ಅದನ್ನೇ ನಾಟಕವೆಂದು ಕರೆಯುವುದಿಲ್ಲ. ಎರಡೂ ದೇಶಗಳಲ್ಲಿ ನಾಟಕವೆಂದರೆ ದೃಶ್ಯ ಕಾವ್ಯವೇ ಆದರೂ ಯೂರೂಪಿನಲ್ಲಿ ಅದಕ್ಕೆ ಹೆಚ್ಚು ಅರ್ಥವನ್ನಿಟ್ಟುಕೊಂಡಿದ್ದಾರೆ. ದೃಶ್ಯ ಕಾವ್ಯದ ರೂಪದಲ್ಲಿದ್ದರೂ ನಿಜವಾದ ನಾಟಕವಲ್ಲದ ಅನೇಕ ಕಾವ್ಯಗಳಿವೆ ಎಂದು ಅವರು ಹೇಳುತ್ತಾರೆ. ಯೂರೋಪಿನ ಸಮಾಲೋಚಕರ ಮತದ ಪ್ರಕಾರ ಒಥೆಲೋ ನಾಟಕ; ಶಾಕುಂತಲ ಉಪಖ್ಯಾನ ಕಾವ್ಯ. ಇದರ ಫಲದಿಂದಾಗಿ ಡೆಸ್ಡಿಮೋನಳ ಚರಿತ್ರವು ಎಷ್ಟು ಪರಿಸ್ಫುಟವಾಗುತ್ತದೋ, ಶಕುಂತಳೆ ಅಥವಾ ಮಿರಾಂಡರ ಚರಿತ್ರೆಯು ಅಷ್ಟು ಪರಿಸ್ಫುಟವಾಗುವುದಿಲ್ಲ. ಡೆಸ್ಡಿಮೋನಳ ಪಾತ್ರವು ಸಜೀವವಾದುದು. ಶಕುಂತಳಾ, ಮಿರಾಂಡರ ಪಾತ್ರ ಧ್ಯಾನ ಪ್ರಾಪ್ತವಾದುದು. ಡೆಸ್ಡಿಮೋನಳ ಕಣ್ಣೀರು ಧಾರೆಯಾಗಿ ಹರಿದು ವಕ್ಷಸ್ಥಳದಲ್ಲಿ ಬೀಳುವುದನ್ನು ನೋಡಬಹುದು. ಆದರೆ ಶಕುಂತಲೆಯ ಕೆಂಪೇರಿದ ಕಣ್ಣು ಮುಂತಾದುವನ್ನು ದುಷ್ಯಂತನ ಮಾತಿನಿಂದ ಮಾತ್ರ ತಿಳಿಯಬಹುದಾಗಿದೆ. ಶಕುಂತಳೆ ಚಿತ್ರಕಾರನಿಂದ ನಿರ್ಮಿತವಾದ ಚಿತ್ರ, ಡೆಸ್ಡಿಮೋನಳಾದರೆ ಸೂರ್ಯನಿಂದ ನಿರ್ಮಿತವಾದ ಸಜೀವ ಪ್ರಾಯ ನಿರ್ಮಾಣ. ಡೆಸ್ಡಿಮೋನಳ ಹೃದಯ ನಮ್ಮ ಸಮ್ಮುಖದಲ್ಲಿ ಸಂಪೂರ್ಣ ತೆರೆದು ವಿಸ್ತೃತವಾಗುತ್ತದೆ. ಶಾಕುಂತಳೆಯ ಹೃದಯವಾದರೋ ಇಂಗಿತದಿಂದ ಮಾತ್ರ ವ್ಯಕ್ತವಾಗುತ್ತದೆ.

ಡೆಸ್ಡಿಮೋನಳ ಚಿತ್ರವೇ ಹೆಚ್ಚು ಉಜ್ವಲವಾಗಿದೆ. ಆದ್ದರಿಂದ ಡೆಸ್ಡಿಮೋನಳ ಪಕ್ಕದಲ್ಲಿ ಶಕುಂತಳೆ ನಿಲ್ಲಲಾಗುವುದಿಲ್ಲ. ಅದಿಲ್ಲದಿದ್ದರೆ ಅಂತತಃ ಇಬ್ಬರೂ ಒಂದೇ. ಶಕುಂತಳೆ ಅರ್ಧ ಮಿರಾಂಡಳು; ಅರ್ಧ ಡೆಸ್ಡಿಮೋನಳು. ವಿವಾಹಿತಳಾದ ಶಕುಂತಳೆ ಡೆಸ್ಡಿಮೋನಳಿಗೆ ಅನುರೂಪಳು ಎಂದು ಟಿ.ಎಸ್. ವೆಂಕಣ್ಣಯ್ಯನವರು ಬಂಕಿಮ ಚಂದ್ರರ ಪ್ರಬಂಧವನ್ನು ಕನ್ನಡಕ್ಕೆ ಪರಿವರ್ತನೆ ಮಾಡಿ ಸುಂದರ ಹೋಲಿಕೆ – ವ್ಯತ್ಯಾಸಗಳೊಂದಿಗೆ ಮೂರೂ ಪಾತ್ರಗಳನ್ನು ವಿಶ್ಲೇಷಿಸಿದ್ದಾರೆ. ತೌಲನಿಕ ಸಾಹಿತ್ಯದ ಪ್ರಬುದ್ಧ ಕರ್ಣಾಟಕದ ಕೃಷಿಯು ಇಲ್ಲಿ ಮನಸೆಳೆಯುತ್ತದೆ. ಒಟ್ಟಿನಲ್ಲಿ ಆಧುನಿಕ ಹೆಣ್ಣಿನ ಬಗೆಗಿನ ಪ್ರಬುದ್ಧ ಕರ್ಣಾಟಕದ ಸಂಕಥನವನ್ನು ಹೀಗೆ ಗ್ರಹಿಸಬಹುದು.

೧. ಆಧುನಿಕ ಹೆಣ್ಣು ಹೊಸ ಮೌಲ್ಯ ಹಾಗೂ ಹೊಸ ತತ್ವಗಳ ನೆಲೆಗಟ್ಟಿನ ಮೇಲೆ ವ್ಯಾಖ್ಯಾನಿತಳಾಗುತ್ತಿದ್ದಳು. ಹೆಣ್ಣಿನ ದೇಹಸೌಂದರ್ಯದ ಜೊತೆಗೆ ಜಾಣ್ಮೆ, ಕೌಶಲ್ಯ ಒಂದು ಮುಖ್ಯ ಮೌಲ್ಯವಾಗಿತ್ತು.

೨. ಆಧುನಿಕ ಕಾಲಘಟ್ಟದ ಹೆಣ್ಣು ಸಮಾಜಮುಖಿ ಆಗುವುದರ ಜೊತೆಗೆ ಮುಗ್ಧತೆ, ಆಧ್ಯಾತ್ಮಿಕತೆ ಮತ್ತು ಸರಳತೆಯನ್ನು ಕಾಯ್ದಿಟ್ಟುಕೊಳ್ಳುವುದು ಅವಶ್ಯಕವಾಗಿತ್ತು.

೩. ಹೊಸ ಆರ್ಥಿಕ ವ್ಯವಸ್ಥೆಯು ಗಂಡನಿಗೆ ನೆರವು ನೀಡಲು ಹೆಣ್ಣು ಕೂಡ ದುಡಿಯುವುದನ್ನು ಪ್ರತಿಪಾದಿಸಿದರೂ

ಅದನ್ನು ಒಂದು ಸೀಮಿತ ಚೌಕಟ್ಟಿನಲ್ಲಿ ವಿವರಿಸುತ್ತದೆ. ಏಕೆಂದರೆ ಕೊನೆಗೂ ಆಕೆಯ ಅಸ್ಮಿತೆ ಅಂಟಿಕೊಂಡಿರುವುದು ಸಂಸಾರ ತೂಗಿಸುವ ಜಾಣ್ಮೆಯಲ್ಲಿ ಮಾತ್ರ.

೪. ಆಧುನಿಕ ಹೆಣ್ಣುಮಕ್ಕಳಲ್ಲಿ ಒಂದು ವಿಶಿಷ್ಟವಾದ ವ್ಯಕ್ತಿ ಸ್ವಾತಂತ್ರ್ಯವನ್ನು ಈ ಕಾಲಘಟ್ಟ ನೀಡಲು ಹವಣಿಸುತ್ತಿತ್ತು.

೫. ಸಾಮಾಜಿಕ ಉಲ್ಲಂಘನೆಗಳ ಬಗ್ಗೆ [ವಿವಾಹೇತರ ಅಥವ ವಿವಾಹಪೂರ್ವ ಲೈಂಗಿಕ ಸಂಬಂಧ] ಒಂದು ಸಹಾನುಭೂತಿ ವ್ಯಕ್ತವಾಗುತ್ತಿದ್ದುದನ್ನು ಗುರುತಿಸಬಹುದು. ಇದೆಲ್ಲದರ ಆಚೆ ಹೆಣ್ಣಿನ ಬಗೆಗೆ ಪಾರಂಪರಿಕ ಮೌಲ್ಯದ ಚೌಕಟ್ಟು ಏನಿತ್ತೋ [ಮುಗ್ಧತೆ, ಸರಳತೆ, ಕ್ಷಮೆ, ತಾಳ್ಮೆ, ಪ್ರೇಮದ ಹಂಬಲ] ಇವುಗಳೂ ಕೂಡ ಗಟ್ಟಿಯಾಗಿ ಪ್ರತಿಪಾದಿಸಲ್ಪಡುತ್ತಿದ್ದವು.

೬. ಹೀಗೆ ಪಾರಂಪರಿಕ ಚೌಕಟ್ಟು ಹಾಗೂ ಆಧುನಿಕ ಮೌಲ್ಯಗಳನ್ನು ಬೆಸೆದು ಸಂ.ಕಾ.ಕ.ಸಂ.ದ ಪ್ರಬುದ್ಧ ಕರ್ಣಾಟಕವು ಸ್ತ್ರೀ ಜಗತ್ತು ಹಾಗೂ ಸ್ತ್ರೀ ಸಂವೇದನೆಯನ್ನು ರಚಿಸುತ್ತಿತ್ತು.

೭. ತೌಲನಿಕ ಸಾಹಿತ್ಯದ ಅಧ್ಯಯನಕ್ಕೆ ಪ್ರಬುದ್ಧ ಕರ್ಣಾಟಕವು ಹೊಸ ಕಾಯಕಲ್ಪವನ್ನು ಮೂಡಿಸಿತು.

# ಉಪಸಂಹಾರ

**ಈ ಅಧ್ಯಯನದ ಒಟ್ಟು ಗ್ರಹಿಕೆಗಳನ್ನು ಹೀಗೆ ಸಂಗ್ರಹಿಸಬಹುದು :**

*ಮೊದಲನೇ ಅಧ್ಯಾಯದಲ್ಲಿ ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ಣಾಟಕದಲ್ಲಿ ರೂಪುಗೊಂಡಿರುವ ಸಾಂಸ್ಕೃತಿಕ ವಾಗ್ವಾದದ ಮುಖ್ಯ ಗ್ರಹಿಕೆಗಳು :*

೧. ಬಿ.ಎಂ. ಶ್ರೀಕಂಠಯ್ಯನವರು ಪಾಶ್ಚಾತ್ಯ ಸಾಹಿತ್ಯದಲ್ಲಿದ್ದ ಟ್ರ್ಯಾಜಿಡಿಗಳನ್ನು ಶ್ರೇಷ್ಠವೆಂದು ಒಪ್ಪಿ ಅವುಗಳು ಏಕೆ ಭಾರತದಲ್ಲಿಲ್ಲ ಎಂದು ಪ್ರಶ್ನಿಸುತ್ತಲೇ ಭಾರತದ ರಂಗಭೂಮಿಯಲ್ಲಿ ಟ್ರ್ಯಾಜಿಡಿಯ ವಸ್ತು ನಾಟಕದ ಆಕೃತಿಯಲ್ಲಿ ಅಡಕವಾಗಿತ್ತೆಂದು ಸಮರ್ಥಿಸಿಕೊಳ್ಳುವ ಪ್ರಯತ್ನವನ್ನು ಮಾಡುತ್ತಾರೆ. ಆದರೆ ಪ್ರಬುದ್ಧ ಕರ್ಣಾಟಕದಲ್ಲಿ ಸಂಸ್ಕೃತದ ನಾಟಕ , ಅಂತಃಸ್ಸತ್ವ ಮತ್ತು ದರ್ಶನಗಳ ಬಗ್ಗೆ ರೂಪುಗೊಳ್ಳುತ್ತಿದ್ದ ಈ ಮುಖ್ಯವಾದ ಸಂಕಥನವು ದೇಶೀಯ ಚಿಂತನೆಯ ಅನನ್ಯತೆಯನ್ನು ಸ್ಥಾಪಿಸಲು ಯತ್ನಿಸುತ್ತದೆ.ಆದ್ದರಿಂದ ವಸಾಹತು ಎಂಬುದು ಕೇವಲ ಸಾಂಸ್ಕೃತಿಕ ಕೀಳರಿಮೆಯನ್ನು ಹುಟ್ಟಿಸುವ ಅನುಭವವಾಗದೇ, ದೇಶೀಯ ತತ್ವದ ಬಗ್ಗೆ ಅಭಿಮಾನವನ್ನು ಉಂಟುಮಾಡುವ ಅನುಭವವಾಗಿ ವ್ಯಕ್ತವಾಗುತ್ತದೆ.

೨. ಇಡೀ ಪ್ರಬುದ್ಧ ಕರ್ಣಾಟಕದಲ್ಲಿರುವ ಎಲ್ಲಾ ವಿವರಗಳನ್ನೂ ಸಂಗ್ರಹ ರೂಪದಲ್ಲಿ ಕೊಡುವ ಉದ್ದೇಶದ ಹಿಂದೆ ಒಂದು ಮುಖ್ಯವಾದ ಸಾಂಸ್ಕೃತಿಕ ರಾಜಕಾರಣ ಕಾರ್ಯ ನಿರ್ವಹಿಸುತ್ತಿರುವುದನ್ನು ಗಮನಿಸಬಹುದು. ಹೊಸ ಯುಗ, ಹೊಸ ಪರಿಸರಕ್ಕೆ ಅಗತ್ಯವಾದ ಅತ್ಯಂತ ವೈವಿಧ್ಯಮಯವಾದ ಸಾಂಸ್ಕೃತಿಕ ಪರಿಸರವನ್ನು ಎಚ್ಚರಿಕೆಯಿಂದ ಕಟ್ಟುತ್ತಿರುವ ಪ್ರಯತ್ನ ಇಲ್ಲಿ ಕಂಡುಬರುತ್ತದೆ. ಈ ಕಟ್ಟುವಿಕೆಯ ಹಿಂದೆ ಪಾಶ್ಚಾತ್ಯ ಸಾಂಸ್ಕೃತಿಕ ಪರಿಸರಕ್ಕೆ ಸಮಾನವಾದ ಸಾಂಸ್ಕೃತಿಕ ಪರಿಸರವನ್ನು ಅಷ್ಟೇ ಗುಣಾತ್ಮಕವಾಗಿ ರೂಪಿಸುತ್ತಿರುವ ತಾದಾತ್ಮ್ಯತೆ ವ್ಯಕ್ತವಾಗುತ್ತದೆ.

೩. ಪ್ರಬುದ್ಧ ಕರ್ಣಾಟಕ ವಿದ್ಯಾರ್ಥಿಗಳನ್ನು ಕೇಂದ್ರೀಕರಿಸಿಕೊಳ್ಳುವುದರ ಮೂಲಕ ಹೊಸ ಕಾಲಘಟ್ಟಕ್ಕೆ ಅಗತ್ಯವಾದ ಹೊಸ ನಾಗರಿಕ ಸಮಾಜವನ್ನು ರೂಪಿಸುತ್ತಿತ್ತು. ಪ್ರತಿಯೊಂದು ಕಾಲದಲ್ಲೂ ಪ್ರತಿಯೊಂದು ಸಾಂಸ್ಕೃತಿಕ ರಾಜಕೀಯ ತತ್ವವು ತನಗೆ ಅಗತ್ಯವಾದಂತಹ ನಾಗರಿಕ ಸಮಾಜವನ್ನು ಕಟ್ಟುತ್ತಿರುತ್ತದೆ. ಪ್ರಬುದ್ಧ ಕರ್ಣಾಟಕ ಕಟ್ಟುತ್ತಿದ್ದ ಈ ನಾಗರಿಕ ಸಮಾಜದಲ್ಲಿ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ ಜಾಗೃತಿಗೊಂಡ ಹಾಗೂ ಹೊಸ ಮೌಲ್ಯಗಳನ್ನು ಮೈಗೂಡಿಸಿಕೊಂಡ ವ್ಯಕ್ತಿಗಳ ರೂಪಣೆ ಆಗುತ್ತಿತ್ತು.ಇದು ದೃಢವಾಗಿ ನಿಲ್ಲುವುದಕ್ಕೆ ಅಗತ್ಯವಾದ ನೆಟ್‌ವರ್ಕ್ [ಬಂಧ]ವನ್ನೂ ಕೂಡ ಪ್ರಬುದ್ಧ ಕರ್ಣಾಟಕವೇ ಕವಿ ಸಮ್ಮೇಳನಗಳ ಮೂಲಕ ಆಯೋಜಿಸುತ್ತಿತ್ತು.

೪. ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಒಂದು ಶ್ರೇಣೀಕರಣ ವ್ಯವಸ್ಥೆ ರೂಪುಗೊಳ್ಳುತ್ತಿರುವುದನ್ನು ಪ್ರಬುದ್ಧ ಕರ್ಣಾಟಕವು ಸೂಚಿಸುತ್ತದೆ. ಈ ಶ್ರೇಣೀಕರಣ ವ್ಯವಸ್ಥೆಯಲ್ಲಿ ಕವಿಗಳು ತುಟ್ಟತುದಿಯಲ್ಲಿರುವುದು ಕಂಡುಬರುತ್ತದೆ.

೫. ಬೆಂ.ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ಣಾಟಕ ಸೃಷ್ಟಿಸುತ್ತಿದ್ದ ಸಮಾಜೋ ರಾಜಕೀಯ ಸಂಕಥನದಲ್ಲಿ 'ಕಲೆಗಾಗಿ ಕಲೆ' ಎನ್ನುವ ತತ್ವಕ್ಕೆ ಹೆಚ್ಚು ಪ್ರಾಧಾನ್ಯತೆ ನೀಡುವುದಿಲ್ಲ. ಬದಲಿಗೆ 'ಸಮಾಜಕ್ಕಾಗಿ ಕಲೆ' ಎನ್ನುವುದರತ್ತ ಪ್ರಬುದ್ಧ ಕರ್ಣಾಟಕದ ತತ್ವವು ತುಡಿಯುತ್ತದೆ.

*ಎರಡನೇ ಅಧ್ಯಾಯದಲ್ಲಿ ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ನಾಟಕದಲ್ಲಿ ರೂಪುಗೊಂಡಿರುವ ರಾಷ್ಟ್ರದ ಬಗೆಗಿನ ಮುಖ್ಯ ಗ್ರಹಿಕೆಗಳು :*

೧. ಹೊಸದಾಗಿ ರೂಪುಗೊಳ್ಳುತ್ತಿದ್ದ 'ಹಿಂದೂ ರಾಷ್ಟ್ರ'ದಲ್ಲಿನ ಬಹುಮುಖತ್ವವನ್ನು ಪ್ರತಿಪಾದಿಸುವುದರತ್ತ ಪ್ರಬುದ್ಧ ಕರ್ನಾಟಕದಲ್ಲಿ ರೂಪುಗೊಳ್ಳುತ್ತಿದ್ದ ಸಂಕಥನಗಳು ಆಸಕ್ತಿಯನ್ನು ವಹಿಸುತ್ತವೆ.

೨. ಕನ್ನಡ ಸಾಂಸ್ಕೃತಿಕ ಮನಸ್ಥಿತಿಯಲ್ಲಿ ದೇಶೀಯ ಪ್ರಭುತ್ವದ ಬಗ್ಗೆ ಇದ್ದ ಗೌರವ ಅಭಿಮಾನಗಳು ವ್ಯಕ್ತವಾಗುತ್ತವೆ. ಇದನ್ನು ಮನಃಶಾಸ್ತ್ರದ ಗ್ರಹಿಕೆಯಲ್ಲಿ 'ಕಾಂಪನ್ಸೇಷನ್ ಥಿಯರಿ' ಎಂದು ಕರೆಯುತ್ತಾರೆ. ಬ್ರಿಟಿಷ್ ಆಳ್ವಿಕೆಯ ಬಗ್ಗೆ ಇದ್ದ ಅಸಮಾಧಾನವನ್ನು ವ್ಯಕ್ತಪಡಿಸುವ ಒಂದು ವಿಧಾನ ದೇಶೀಯ ಪ್ರಭುತ್ವಕ್ಕೆ ಗಾಢವಾದ ನಿಷ್ಠೆಯನ್ನು ತೋರುವುದಾಗಿದೆ.

೩. ಆಧುನಿಕೋತ್ತರ ಕಾಲಘಟ್ಟಕ್ಕಿಂತ ಮುಂಚೆ ಬಂದ ಕಾದಂಬರಿಯ ಬಗೆಗಿನ ಸಿದ್ಧಾಂತಗಳೆಲ್ಲವೂ ಕಾದಂಬರಿಯನ್ನು ಆಧುನಿಕ ತಂತ್ರಜ್ಞಾನ ಮತ್ತು ಆಧುನಿಕ ಸಮಾಜದ ಸೃಷ್ಟಿ ಎಂದು ತಿಳಿದಿದ್ದವು. ಆದರೆ ಪ್ರಬುದ್ಧ ಕರ್ನಾಟಕದಲ್ಲಿ ಕಾದಂಬರಿ, ಅನ್ಯಭಾಷೆಯ ಅನುವಾದಿತ ಕಾದಂಬರಿಗಳ ಸೃಷ್ಟಿಯಾಗುತ್ತಿರುವ ಸಂಕಥನಗಳನ್ನು ಗಮನಿಸಿದರೆ ಕಾದಂಬರಿಯೇ ಆಧುನಿಕ ಮನುಷ್ಯ ಮತ್ತು ಆಧುನಿಕ ಸಮಾಜವನ್ನು ಸೃಷ್ಟಿಸುವುದಕ್ಕೆ ಮಾದರಿಯನ್ನು ಕಟ್ಟುತ್ತಿತ್ತೆಂದು ಹೇಳಬಹುದು.

೪. ಕನ್ನಡ ಭಾಷೆಯನ್ನು ಕಟ್ಟುವ ಕೆಲಸದಲ್ಲಿ ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ನಾಟಕವು ನಿರ್ಣಾಯಕವಾದ ಪಾತ್ರವನ್ನು ವಹಿಸುತ್ತಿತ್ತು.

*ಮೂರನೇ ಅಧ್ಯಾಯದಲ್ಲಿ ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ನಾಟಕದಲ್ಲಿ ರೂಪುಗೊಂಡಿರುವ ಸಾಮಾಜಿಕ ಬದಲಾವಣೆಗೆ ಪ್ರತಿಕ್ರಿಯೆಯ ಮುಖ್ಯ ಗ್ರಹಿಕೆಗಳು:*

೧. ಲೋಕದಲ್ಲಿ ದುರ್ಬಲ ವರ್ಗದವರ ಮೇಲೆ ಬಲಾಢ್ಯರ ದಬ್ಬಾಳಿಕೆಯು ನಿರಂತರವಾಗಿ ನಡೆಯುತ್ತಾಬಂದಿದೆ. ಇದರ ಮೂಲವು ಆರ್ಥಿಕ ಅಸಮಾನತೆ ಎಂಬುದು ನಿಡುಗಾಲದ ಸತ್ಯ. ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ನಾಟಕದ ಸಾಂಸ್ಕೃತಿಕ ಸಂಕಥನಗಳಲ್ಲಿ ಸಾಮಾಜಿಕ ಪುನರ್‌ರಚನೆಯು ಒಂದು ಪ್ರಮುಖ ನೆಲೆ.

೨. ಸರ್. ಎಂ. ವಿಶ್ವೇಶ್ವರಯ್ಯ ಅವರ ಜೀವನದ ಬಗ್ಗೆ ರೂಪುಗೊಳ್ಳುವ ಸಂಕಥನವು ಪ್ರಬುದ್ಧ ಕರ್ನಾಟಕದ ಮೂಲಕ ಆದರ್ಶ ಆಧುನಿಕ ಪ್ರಜೆಯನ್ನು ಕಟ್ಟುತ್ತಿದೆ.

೩. ವ್ಯಕ್ತಿ ಮತ್ತು ಸಮಾಜದ ನಡುವೆ ಅಗತ್ಯವಾಗಿ ಇರಬೇಕಾದ ಅವಿನಾಭಾವ ಸಂಬಂಧದ ಮೌಲ್ಯವನ್ನು ಪ್ರಬುದ್ಧ ಕರ್ನಾಟಕ ಮುಂದಿಡುತ್ತದೆ.

೪. ಪಾರಂಪರಿಕ ಸಾಮಾಜಿಕ ವ್ಯವಸ್ಥೆಯನ್ನು ತಾರ್ಕಿಕವಾಗಿ ಪ್ರಶ್ನಿಸಿದ ಆಧುನಿಕ ಪೂರ್ವಕಾಲಘಟ್ಟದ ಕಥನಕಾರರ ತತ್ವಗಳನ್ನು ಪ್ರಬುದ್ಧ ಕರ್ನಾಟಕವು ಪುನರ್‌ರಚಿಸುತ್ತಿತ್ತು.

೫. ಉದಾರವಾದ ಮತ್ತು ಮಾನವತಾವಾದದ ಮೌಲ್ಯಗಳನ್ನು ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ಣಾಟಕವು ಗಟ್ಟಿಯಾಗಿ ಪ್ರತಿಪಾದಿಸುತ್ತಿತ್ತು.

***ನಾಲ್ಕನೇ ಅಧ್ಯಾಯದಲ್ಲಿ ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ಣಾಟಕದಲ್ಲಿ ರೂಪುಗೊಂಡಿರುವ ಮಹಿಳೆಯ ಬಗೆಗಿನ ಮುಖ್ಯ ಗ್ರಹಿಕೆಗಳು :***

೧. ಆಧುನಿಕ ಹೆಣ್ಣು ಹೊಸ ಮೌಲ್ಯ ಹಾಗೂ ಹೊಸ ತತ್ವಗಳ ನೆಲೆಗಟ್ಟಿನ ಮೇಲೆ ವ್ಯಾಖ್ಯಾನಿತಳಾಗುತ್ತಿದ್ದಳು. ಹೆಣ್ಣಿನ ದೇಹಸೌಂದರ್ಯದ ಜೊತೆಗೆ ಜಾಣ್ಮೆ, ಕೌಶಲ್ಯ ಒಂದು ಮುಖ್ಯ ಮೌಲ್ಯವಾಗಿತ್ತು.

೨. ಆಧುನಿಕ ಕಾಲಘಟ್ಟದ ಹೆಣ್ಣು ಸಮಾಜಮುಖಿ ಆಗುವುದರ ಜೊತೆಗೆ ಮುಗ್ಧತೆ, ಆಧ್ಯಾತ್ಮಿಕತೆ ಮತ್ತು ಸರಳತೆಯನ್ನು ಕಾಯ್ದಿಟ್ಟುಕೊಳ್ಳುವುದು ಅವಶ್ಯಕವಾಗಿತ್ತು.

೩. ಹೊಸ ಆರ್ಥಿಕ ವ್ಯವಸ್ಥೆಯು ಗಂಡನಿಗೆ ನೆರವು ನೀಡಲು ಹೆಣ್ಣು ಕೂಡ ದುಡಿಯುವುದನ್ನು ಪ್ರತಿಪಾದಿಸಿದರೂ ಅದನ್ನು ಒಂದು ಸೀಮಿತ ಚೌಕಟ್ಟಿನಲ್ಲಿ ವಿವರಿಸುತ್ತದೆ. ಏಕೆಂದರೆ ಕೊನೆಗೂ ಆಕೆಯ ಅಸ್ಮಿತೆ ಅಂಟಿಕೊಂಡಿರುವುದು ಸಂಸಾರ ತೂಗಿಸುವ ಜಾಣ್ಮೆಯಲ್ಲಿ ಮಾತ್ರ

೪. ಆಧುನಿಕ ಹೆಣ್ಣುಮಕ್ಕಳಲ್ಲಿ ಒಂದು ವಿಶಿಷ್ಟವಾದ ವ್ಯಕ್ತಿ ಸ್ವಾತಂತ್ರ್ಯವನ್ನು ಈ ಕಾಲಘಟ್ಟ ನೀಡಲು ಹವಣಿಸುತ್ತಿತ್ತು.

೫. ಸಾಮಾಜಿಕ ಉಲ್ಲಂಘನೆಗಳ ಬಗ್ಗೆ [ವಿವಾಹೇತರ ಅಥವಾ ವಿವಾಹಪೂರ್ವ ಲೈಂಗಿಕ ಸಂಬಂಧ] ಒಂದು ಸಹಾನುಭೂತಿ ವ್ಯಕ್ತವಾಗುತ್ತಿದ್ದುದನ್ನು ಗುರುತಿಸಬಹುದು. ಇದೆಲ್ಲದರ ಆಚೆ ಹೆಣ್ಣಿನ ಬಗೆಗೆ ಪಾರಂಪರಿಕ ಮೌಲ್ಯದ ಚೌಕಟ್ಟು ಏನಿತ್ತೋ [ಮುಗ್ಧತೆ, ಸರಳತೆ, ಕ್ಷಮೆ, ತಾಳ್ಮೆ, ಪ್ರೇಮದ ಹಂಬಲ] ಇವುಗಳೂ ಕೂಡ ಗಟ್ಟಿಯಾಗಿ ಪ್ರತಿಪಾದಿಸಲ್ಪಡುತ್ತಿದ್ದವು.

೬. ಹೀಗೆ ಪಾರಂಪರಿಕ ಚೌಕಟ್ಟು ಹಾಗೂ ಆಧುನಿಕ ಮೌಲ್ಯಗಳನ್ನು ಬೆಸೆದು ಸೆಂ.ಕಾ.ಕ.ಸಂ.ದ ಪ್ರಬುದ್ಧ ಕರ್ಣಾಟಕವು ಸ್ತ್ರೀ ಜಗತ್ತು ಹಾಗೂ ಸ್ತ್ರೀ ಸಂವೇದನೆಯನ್ನು ರಚಿಸುತ್ತಿತ್ತು.

೭. ತೌಲನಿಕ ಸಾಹಿತ್ಯದ ಅಧ್ಯಯನಕ್ಕೆ ಪ್ರಬುದ್ಧ ಕರ್ಣಾಟಕವು ಹೊಸ ಕಾಯಕಲ್ಪವನ್ನು ಮೂಡಿಸಿತು.

## ಪರಾಮರ್ಶನ ಗ್ರಂಥಗಳು :


೧. ಅಂಬಿಕಾತನಯದತ್ತ-ಗರಿ-ಶ್ರೀಮಾತಾ ಪ್ರಕಾಶನ-೨೦೦೬

೨. ಆಕ್ಸ್‌ಫರ್ಡ್ ಡಿಕ್ಷನರಿ ಆಫ್ ಫಿಲಾಸಫಿ - ನ್ಯೂಯಾರ್ಕ್ - ೧೯೯೪

೩. ಕರ್ನಾಟಕ - ಕನ್ನಡ ವಿಶ್ವಕೋಶ - ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ - ಮೈ.ವಿ.ವಿ. - ೧೯೭೯

೪. ಕೀರ್ತಿನಾಥ ಕುರ್ತಕೋಟಿ - ಯುಗಧರ್ಮ ಮತ್ತು ಸಾಹಿತ್ಯ ದರ್ಶನ - ಕನ್ನಡ ಮತ್ತು ಸಂಸ್ಕೃತಿ ಇಲಾಖೆ - ೨೦೧೦

೫. ಕುವೆಂಪು - ಪಕ್ಷಿಕಾಶಿ - ಉದಯರವಿ ಪ್ರಕಾಶನ - ೧೯೯೯

೬. ಕುವೆಂಪು - ಶ್ರೀರಾಮಾಯಣ ದರ್ಶನಂ - ಕನ್ನಡ ಮತ್ತು ಸಂಸ್ಕೃತಿ ಇಲಾಖೆ - ೨೦೧೧

೭. ಕೃಷ್ಣಶಾಸ್ತ್ರಿ ಎ. ಆರ್. - ಕಾಲೇಜ್ ಬರವಣಿಗೆ - ಮೊದಲನೆಯ ಆವರ್ತ - ಸಂ.ಕಾ.ಕ.ಸಂ. - ೧೯೫೩

೮. ಕ್ಲೈರ್ ಕೋಲ್‌ಬ್ರೂಕ್ - ನ್ಯೂ ಲಿಟರರಿ ಹಿಸ್ಟರೀಸ್ - ಮ್ಯಾಂಚೆಸ್ಟರ್ ಯುನಿವರ್ಸಿಟಿ ಪ್ರೆಸ್ - ೧೯೯೭

೯. ಗೋವಿಂದರಾಜು ಸಿ.ಆರ್. - ಹೊಸತು ವಾಚಿಕೆ - ಸಾಹಿತ್ಯ ಸಂವಾದ - ನವಕರ್ನಾಟಕ ಪ್ರಕಾಶನ - ೨೦೦೫

೧೦. ದ.ರಾ. ಬೇಂದ್ರೆ - ಕನ್ನಡ ಜೀವನ ಲಹರಿ - ಔದುಂಬರ ಗಾಥೆ - ಸಂ. ೨ - ದರ್ಶನ - ದ.ರಾ. ಬೇಂದ್ರೆ ಜೀವನ ಮಹಾಕಾವ್ಯ

೧೧. ನಾಗಭೂಷಣಸ್ವಾಮಿ ಓ.ಎಲ್. - ವಿಮರ್ಶೆಯ ಪರಿಭಾಷೆ - ಅಂಕಿತ ಪುಸ್ತಕ ಪ್ರಕಾಶನ - ೧೯೯೮

೧೨. ನಾಗರಾಜ್ ಡಿ.ಆರ್. - ಸಾಹಿತ್ಯ ಕಥನ - ಅಕ್ಷರ ಪ್ರಕಾಶನ - ಹೆಗ್ಗೋಡು - ೨೦೦೬

೧೩. ನಾರಾಯಣ ಕೆ.ವಿ. - ಬೇರು ಕಾಂಡ ಚಿಗುರು - ವಿವೇಕ ಪ್ರಕಾಶನ - ೧೯೯೩

೧೪. ಪ್ರಬುದ್ಧ ಕರ್ಣಾಟಕದ ಸಂಚಿಕೆಗಳು ೧೯೧೯ ರಿಂದ ೧೯೩೨ ಮತ್ತು ೧೯೪೫ರ ಬೆಳ್ಳಿ ಸಂಚಿಕೆ

೧೫. ಫಣಿರಾಜ್ ಕೆ. - ಅಂಟೋನಿಯೊ ಗ್ರಾಮ್ಷಿ - ಅಭಿನವ ಪ್ರಕಾಶನ - ೨೦೦೩

೧೬. ಫ್ರೆಡ್ ಬಾಲ್ಮೇರ್ ಅಂಡ್ ಜಿ.ಎನ್.ದೇವಿ - ಬಿಟ್ವೀನ್ ಟ್ರೆಡಿಷನ್ ಅಂಡ್ ಮಾಡರ್ನಿಟಿ - ಸೇಜ್ ಪಬ್ಲಿಕೇಷನ್ - ನ್ಯೂ ಡೆಲ್ಲಿ - ೧೯೯೮

೧೭. ಬರ್ನಾರ್ಡ್ ಕೋನ್ : ದಿ ಬರ್ನಾರ್ಡ್ ಕೋನ್ ಆಮ್ನಿಬಸ್ - ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್ - ೨೦೦೪

೧೮. ಬಿ.ಎಂ.ಶ್ರೀ. – 'ಶ್ರೀ ಸಾಹಿತ್ಯ' – ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ – ಮೈ.ವಿ.ವಿ. – ೨೦೦೨

೧೯. ವೆಂಕಟೇಶ ಅಯ್ಯಂಗಾರ್ ಮಾಸ್ತಿ – ನಮ್ಮ ಹೊಸ ಸಾಹಿತ್ಯದ ಅಶ್ವಿನೀ ದೇವತೆಗಳು – ಪ್ರಬುದ್ಧ ಕರ್ಣಾಟಕ – ಬೆಳ್ಳಿ ಸಂಚಿಕೆ – ೧೯೪೫

೨೦. ವೆಂಕಟೇಶ ಮೂರ್ತಿ ಟಿ. – ಕನ್ನಡ ನಾಟಕ : ಯಾಜಮಾನ್ಯ ಸಂಕಥನ – ಅಧ್ಯಯನ ಮಂಡಲ – ಬೆಂಗಳೂರು – ೨೦೦೯

೨೧. ಶಾಮರಾಯ ತ.ಸು. – ಕನ್ನಡ ಸಾಹಿತ್ಯ ಚರಿತ್ರೆ – ಕನ್ನಡ ಸಾಹಿತ್ಯ ಪರಿಷತ್ತು – ೨೦೧೦

೨೨. ಶಿವರುದ್ರಪ್ಪ ಜಿ.ಎಸ್. – ಸೌಂದರ್ಯ ಸಮೀಕ್ಷೆ – ಕಾಮಧೇನು ಪುಸ್ತಕ ಭವನ – ೨೦೧೧

೨೩. ಶಿವಾರೆಡ್ಡಿ ಕೆ.ಸಿ. – ಕನ್ನಡದ ಹಾಡುಪಾಡು – ಅಧ್ಯಯನ ಮಂಡಲ – ಬೆಂಗಳೂರು – ೨೦೦೩

೨೪. ಶ್ರೀನಿವಾಸಮೂರ್ತಿ ಎಂ.ಆರ್. – ವಚನ ಧರ್ಮಸಾರ – ಕನ್ನಡ ಸಾಹಿತ್ಯ ಪರಿಷತ್ತು – ೨೦೦೯

೨೫. ಶೇಷಗಿರಿರಾವ್ ಎಲ್.ಎಸ್. – ಸಮಗ್ರ ವಿಮರ್ಶಾ ಸಾಹಿತ್ಯ ಸಂ. ೧ – ಕನ್ನಡ ಮತ್ತು ಸಂಸ್ಕೃತಿ ಇಲಾಖೆ – ಬೆಂಗಳೂರು – ೨೦೧೦

೨೬. ಸುಮಾ ಬಿ. ಯು. – ಕನ್ನಡ ಸಾಹಿತ್ಯ ಪ್ರತಿಭೆ ಮತ್ತು ಪ್ರಭುತ್ವ – ಅಪ್ರಕಟಿತ ಪಿಹೆಚ್.ಡಿ ಪ್ರಬಂಧ – ೨೦೦೬

೨೭. ಹಡಪದಣ್ಣಯ್ಯನ ಪುಣ್ಯಸ್ತ್ರೀ ಲಿಂಗಮ್ಮನ ವಚನ – ಶಿವಶರಣೆಯರ ವಚನಗಳು ಸಂ. – ಕನ್ನಡ ಮತ್ತು ಸಂಸ್ಕೃತಿ ಇಲಾಖೆ – ಬೆಂಗಳೂರು – ೧೯೯೫



## "ಸಂಕ್ಷಿಪ್ತ"

| | | |
|---|---|---|
| ಸೆಂ.ಕಾ.ಕ.ಸಂ. | = | ಸೆಂಟ್ರಲ್ ಕಾಲೇಜು ಕರ್ಣಾಟಕ ಸಂಘ |
| ಪ್ರ.ಕ. | = | ಪ್ರಬುದ್ಧ ಕರ್ಣಾಟಕ |
| ಎ.ಆರ್.ಕೃ.ಶಾ. | = | ಎ. ಆರ್. ಕೃಷ್ಣಶಾಸ್ತ್ರಿಗಳು |
| ಸರ್. ಎಂ.ವಿ. | = | ಸರ್. ಎಂ. ವಿಶ್ವೇಶ್ವರಯ್ಯನವರು |
| ಮೈ.ವಿ.ವಿ. | = | ಮೈಸೂರು ವಿಶ್ವವಿದ್ಯಾನಿಲಯ |
| ಟಿ.ಎಸ್.ವೆಂ. | = | ಟಿ. ಎಸ್. ವೆಂಕಣ್ಣಯ್ಯನವರು |